# ಚಿಕ್ಕೋಡಿ ತಾಲೂಕಿನ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿರುವ ಸಂಪ್ರಬಂಧ)

◆ ಸಂಶೋಧನ ವಿದ್ಯಾರ್ಥಿ ◆

ಮುರುಘೇಂದ್ರಯ್ಯಾ ಗಂಗಯ್ಯಾ ವಿಭೂತಿ

◆ ಮಾರ್ಗದರ್ಶಕರು ◆

ಡಾ. ಬಸವರಾಜ ಎಸ್. ಅಕ್ಕಿ

◆ ಚರಿತ್ರೆ ವಿಭಾಗ ◆

ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ

ಹಾರೂಗೇರಿ. ತಾ. ರಾಯಬಾಗ.




ಚರಿತ್ರೆ ಅಧ್ಯಯನ ವಿಭಾಗ

ಸಂಯೋಜನೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ - ೫೮೩ ೨೭೬

೨೦೦೮

# ಚಿಕ್ಕೋಡಿ ತಾಲೂಕಿನ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)


✦ ಸಂಶೋಧನ ವಿದ್ಯಾರ್ಥಿ ✦

**ಮುರುಘೇಂದ್ರಯ್ಯಾ ಗಂಗಯ್ಯಾ ವಿಭೂತಿ**

✦ ಮಾರ್ಗದರ್ಶಕರು ✦

**ಡಾ. ಬಸವರಾಜ ಎನ್. ಅಕ್ಕಿ**






✦ ಚರಿತ್ರೆ ವಿಭಾಗ ✦

**ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ**

**ಹಾರೂಗೇರಿ, ತಾ. ರಾಯಬಾಗ.**








ಚರಿತ್ರೆ ಅಧ್ಯಯನ ವಿಭಾಗ

ಸಂಯೋಜನೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ - ೫೮೩೨೭೬

೨೦೦೮

# ಪ್ರಮಾಣ ಪತ್ರ

**'ಚಿಕ್ಕೋಡಿ ತಾಲೂಕಿನ ಸಾಂಸ್ಕೃತಿಕ ಅಧ್ಯಯನ'** ಎಂಬ ಶಿರ್ಷಿಕೆಯ ಸಂಪ್ರಬಂಧವನ್ನು **ಡಾ. ಬಸವರಾಜ ಎನ್. ಅಕ್ಕಿ** ಅವರ ಮಾರ್ಗದರ್ಶನದಲ್ಲಿ ನಾನು ಸಿದ್ದಪಡಿಸಿದ್ದೇನೆ. ಹಾರೂಗೇರಿಯ ಶ್ರೀ. ಬಿ. ಆರ್. ದರೂರ ಸಂಶೋದನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಅಧ್ಯಯನ ವಿಭಾಗಕ್ಕೆ ಎಮ್.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವದಿಲ್ಲ. ಮತ್ತು ಈ ಮೊದಲು ಇದನ್ನು ಇಡಿಯಾಗಿ ಇಲ್ಲವೇ ಬಿಡಿಯಾಗಿ ಪ್ರಕಟಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸ್ಥಳ : ಹಾರೂಗೇರಿ**
**ದಿನಾಂಕ** : 3-10-2008

**ಮುರಘೇಂದ್ರಯ್ಯಾ ಗಂಗಯ್ಯಾ. ವಿಭೂತಿ**
ಸಂಶೋಧನಾ ವಿದ್ಯಾರ್ಥಿ
ಶ್ರೀ. ಬಿ. ಆರ್. ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ

# ದೃಢೀಕರಣ ಪತ್ರ

ಮುರಘೇಂದ್ರಯ್ಯಾ ಗಂಗಯ್ಯಾ ವಿಭೂತಿ ಇವರು **"ಚಿಕ್ಕೋಡಿ ತಾಲೂಕಿನ ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಅಧ್ಯಯನ ವಿಭಾಗಕ್ಕೆ **ಎಂ. ಫಿಲ್** ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ. ಮತ್ತು ಈ ಮೊದಲು ಎಲ್ಲಿಯೂ ಇಡಿಯಾಗಿ ಇಲ್ಲವೇ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ ; ಹಾರೂಗೇರಿ

ದಿನಾಂಕ ; 3-10-2008

**ಡಾ. ಬಸವರಾಜ ಎನ್. ಅಕ್ಕಿ**
ಮಾರ್ಗದರ್ಶಕರು
ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ

## ಬೆಳಗಾವಿ ಜಿಲ್ಲೆಯ ನಕ್ಷೆ



## "ಚಿಕ್ಕೋಡಿ ತಾಲೂಕಿನ ಸಾಂಸ್ಕೃತಿಕ ಅಧ್ಯಯನದ ಉದ್ದೇಶ"

ಒಂದು ನಾಡಿನ ಇತಿಹಾಸವೆಂದರೆ ಆಯಾ ಪ್ರದೇಶದಲ್ಲಿ ಪ್ರಚಲಿತವಿರುವ ಸಂಪ್ರದಾಯ ಆಚರಣೆ, ಹಬ್ಬ-ಹರಿದಿನ, ಸಾಹಿತ್ಯ, ಶಿಲ್ಪಕಲೆ, ನೃತ್ಯ, ನಾಟಕ, ಶಿಲಾಶಾಸನಗಳು, ತಾಮ್ರಪಟಗಳು, ನಾಣ್ಯ ತಾಡೋಲೆಗಳನ್ನೆಲ್ಲ ಒಳಗೊಂಡ ಅಂಶಗಳ ಸಾರವೆನ್ನಬೇಕು. ಈ ನಿಟ್ಟಿನಲ್ಲಿ ಇಡೀ ಕರ್ನಾಟಕದಲ್ಲಿಯೇ ಬಹುದೊಡ್ಡ ತಾಲೂಕು ಎಂಬ ಖ್ಯಾತಿಗೆ ಒಳಗಾಗಿರುವ ಚಿಕ್ಕೋಡಿಯು ಬರೀ ಭೌಗೋಳಿಕವಾಗಿ ಮಾತ್ರ ಹಿಂದಿಲ್ಲ ಅಲ್ಲಿನ ಸಾಹಿತ್ಯ, ಸಂಸ್ಕೃತಿ, ಧರ್ಮ ಸಮನ್ವಯತೆಯು ಸಹ ವಿಶಿಷ್ಟ ಹಾಗೂ ಉದಾತ್ತವಾದುದು ಎಂಬುವುದರಲ್ಲಿ ಸಂದೇಹವಿಲ್ಲ.

ಚಿಂಚಣಿ, ನಿಪ್ಪಾಣಿ, ಆಡಿ, ಯಡೂರ, ಚಿಕ್ಕೋಡಿ ಮುಂತಾದೆಡೆ ಇರುವ ಲಿಂಗಾಯತ ಮಠಗಳು. ಕೊಥಳಿ, ಸ್ತವನಿಧಿ ಮುಂತಾದ ಜೈನರ ಶೃಧ್ಧಾ ಕೇಂದ್ರಗಳು. ಕರೋಶಿ, ಚಾಂದಶಿರದವಾಡ, ಶಮನೇವಾಡಿ, ಸದಲಗಾ, ಬೋರಗಾಂವಿಯಲ್ಲಿರುವ ಹಾಲುಮತದ ಮಂದಿರಗಳು. ಚಿಕ್ಕೋಡಿ, ನಿಪ್ಪಾಣಿ, ಅಕ್ಕೋಳ, ನನದಿ, ಅಂಕಲಿ, ಶಿರಗಾಂವ, ನಾಗರಮುನ್ನೊಳಿಗಳಲ್ಲಿರುವ ರಾಜವಾಡೆಗಳು. ಹಲವಾರು ಶಿಲಾಶಾಸನಗಳು. ತಾಮ್ರಪಟಗಳು, ನಿಷಿಧಿ ಕಲ್ಲುಗಳು, ವೀರಗಲ್ಲುಗಳು, ಮಾಸ್ತಿ ಕಲ್ಲುಗಳು ಇತ್ಯಾದಿ ಕುರುಹುಗಳು ಸಮನ್ವಯ ಸಂಸ್ಕೃತಿ ರೂಪಗೊಳ್ಳಲು ಕಾರಣವಾಗಿವೆ ಎಂಬುವುದರಲ್ಲಿ ಎರಡು ಮಾತಿಲ್ಲ.

ದಿಗಂಬರ ಪಂಥದ ಮುನಿಪರಂಪರೆಯೇ ನಶಿಸಿಹೋಯಿತೆಂಬ ಆತಂಕ ಉಂಟಾದಾಗ ಮತ್ತೆ ದಿಗಂಬರ ಮುನಿ ಪರಂಪರೆಗೆ ಚಾಲನೆ ನೀಡಿ ಸಕಲ ಜೀವಾತ್ಮರಿಗೆ ಹಿತವನ್ನು ನೀಡಿ ದೇಶಾದ್ಯಂತ ಸುತ್ತಾಡಿ ಅಹಿಂಸಾ ಧರ್ಮದ ಪ್ರಸಾರ ಮಾಡಿದ ಆಚಾರ್ಯ ಶಾಂತಿಸಾಗರರು ಚಿಕ್ಕೋಡಿ ತಾಲೂಕಿಗೆ ಬಹು ದೊಡ್ಡ ಮೆರಗು ತಂದು ಕೊಟ್ಟರು. ಅದರಂತೆಯೇ ಆಚಾರ್ಯ ದೇಶಭೂಷಣರು ತ್ಯಾಗಯೋಗ ಮಹಾಮೇರುವಿನಂತೆ ಹೊಳೆಯುತ್ತಿರುವ ವಿದ್ಯಾಸಾಗರ ಮುನಿಗಳು ಜಿನ ಮುನಿಗಳ ಪರಂಪರೆಗೆ ಹೊಸ ಅರ್ಥ ಬರೆದರು. ಅದೇ ರೀತಿ ಮಾನವ ಲೋಕದ ಕಲ್ಯಾಣಕ್ಕಾಗಿ ಚಿಂಚಣಿಗೆ ಬಂದ ಪೂಜ್ಯ ಅಲ್ಲಮ ಪ್ರಭುಗಳಿಂದಲೇ ರೂಪು ತಳೆದ ಅಲ್ಲಮ ಪ್ರಭುದೇವ ಸಂಸ್ಥಾನ ಮಠ ಚಿಂಚಣಿ, ಚಿಕ್ಕೋಡಿಯ ಸಂಪಾದನಮಠ, ಪೌರಾಣಿಕ ಹಿನ್ನಲೆ ಹೊಂದಿರುವ ಯಡೂರ ವೀರಭದ್ರ ಮಂದಿರ ಹಾಗೂ ಕಾಡಸಿದ್ದೇಶ್ವರ ಮಠ, ಆಡಿಯ ಮಲ್ಲಯ್ಯಾ, ಲಿಂಗಾಯತ ಹಾಗೂ ಜೈನರ ಶೃದ್ಧಾ ಕೇಂದ್ರವಾಗಿರುವ ಘಟ್ಟಗಿ ಬಸವೇಶ್ವರ, ಕೇರೂರಿನ ಅರಣ್ಯ ಸಿದ್ಧ,

ಯಕ್ಸಂಬಾದ ಬೀರೇಶ್ವರ, ಶಿರದವಾಡದ ಚಾಂದ ಫೀರ, ಬೆಡಕಿಹಾಳದ ಸಿದ್ದೇಶ್ವರ, ಅಕ್ಕೋಳದ ಮಹಾಲಕ್ಷ್ಮೀ ಹಾಗೂ ಮಾನವ ಕುಲಕೋಟಿಯೊಂದಿಗೆ ಸಕಲ ಜೀವಿಗಳ ಹಿತಕ್ಕಾಗಿ ತ್ರಿಕರಣ ಶುದ್ಧಿಗಾಗಿ ಸೇವೆ ಸಲ್ಲಿಸುತ್ತಿರುವ ಜಂಗಮ ಜ್ಯೋತಿಗಳಿಂದ ಸಾಧು ಸಂತರು, ಸತ್ಪುರುಷರಿಂದ ಪುನೀತವಾದ ಪವಿತ್ರ ಭೂಮಿ ಚಿಕ್ಕೋಡಿ ತಾಲೂಕಿನದು ಎಂದರೆ ಅತಿಶಯೋಕ್ತಿಯಾಗಲಾರದು. ಬಾಳೈ ಮಾಮಾ ರಂತಹ ಸಂತರು ಹುಟ್ಟಿ ನಲಿದಾಡಿಸದ ಪುಣ್ಯ ಭೂಮಿ ಇದು.

ಡಾ. ಆ.ನೆ.ಉಪಾಧ್ಯೆ, ದೇವೇಂದ್ರತನಯ, ಮೈಶಾಳೆ, ಶ್ರೀಕಾಂಕ ಖೋತ, ಡಾ॥ ಅನಿಲ ಕಮತಿ, ಡಾ॥ ದಯಾನಂದ ನೂಲಿ, ಪ್ರೋ. ಎಸ್. ವೈ. ಹಂಜಿ, ಶ್ರೀಪಾದ ಕುಂಬಾರ, ಪ್ರೊ. ಸುಬ್ರಾವ ಎಂಟೆತ್ತಿನವರ, ಮಹಾದೇವ ಮೋರೆ, ಇಂದಿರಾ ಸಂತ, ಧರಿಗೌಡಾ ಪಾಟೀಲ ಮುಂತಾದ ಘಟಾನುಘಟಿ ಸಾಹಿತಿಗಳ ದಂಡೇ ಈ ತಾಲೂಕಿನಲ್ಲಿದೆ. ಸಾಹಿತ್ಯ, ಕಲೆ, ಬಹುಭಾಷೆ, ಧರ್ಮ ಸಮನ್ವಯಗಳ ಮೂಲಕ ವಿಶೇಷ ಸಂಸ್ಕೃತಿಯನ್ನು ಒಳಗೊಂಡು ಗವುನ ಸೆಳೆದಿರುವ ಚಿಕ್ಕೋಡಿ ತಾಲೂಕವು ಅಧ್ಯಯನಕ್ಕೆ ಯೋಗ್ಯವೆಂಬುವುದರಲ್ಲಿ ಸಂದೇಹವಿಲ್ಲ.

ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಿಂದ ನೋಡಿದಾಗ ಸ್ಥಳೀಯ ಇತಿಹಾಸ, ಧರ್ಮ, ಸಾಹಿತ್ಯ, ಕಲೆ, ಮುಂತಾದ ಅಂಶಗಳ ಅಂಶಿಕ ಸಮೀಕ್ಷೆ ನಡೆದಿದ್ದು ಕಂಡುಬರುತ್ತದೆ. ಪ್ರೊ. ಎಸ್. ವೈ . ಹಂಜಿಯವರು ಈ ನಿಟ್ಟಿನಲ್ಲಿ ಕೆಲಸ ಮಾಡಿದ್ದು. ಡಾ. ಪಿ. ಜಿ. ಕೆಂಪಣ್ಣವರ ಅವರು ಚಿಕ್ಕೋಡಿ ತಾಲೂಕಿನ ಸಾಹಿತ್ಯ ಸಮೀಕ್ಷೆಯನ್ನು ಕೈಗೊಂಡಿದ್ದಾರೆ. ಆದರೆ ಸಮಗ್ರ ಅಧ್ಯಯನದ ಕೊರತೆ ಕಂಡು ಬಂದಿರುವುದರಿಂದ ನಾನು ಈ ಅಧ್ಯಯನಕ್ಕೆ ತೊಡಗಿದೆ. ಈ ಮೂಲಕ ಚಿಕ್ಕೋಡಿ ತಾಲೂಕಿನ ಚರಿತ್ರೆ, ಧರ್ಮ, ಸಾಹಿತ್ಯ, ಕೃಷಿ, ಭೌಗೋಳಿಕ ಅಂಶ, ಶಿಕ್ಷಣ, ಸಹಕಾರ ಮುಂತಾದವುಗಳ ಸಮಗ್ರ ಅಧ್ಯಯನವು ನಡೆಯಬೇಕಾಗಿರುವುದು ಅವಶ್ಯವೆನಿಸುವದರಿಂದ ಶಿಸ್ತು ಬದ್ಧ ಅಧ್ಯಯನ ನಡೆಸಿರುವೆ. ಇದಕ್ಕಾಗಿ ಹಲವಾರು ಶಿಲಾ ಶಾಸನಗಳ, ಪ್ರಾಚೀನ ಕೃತಿಗಳ, ಮಠ, ಮಂದಿರಗಳ, ಪತ್ರಿಕೆ, ಸ್ಮರಣ ಸಂಚಿಕೆಗಳ ವಿದ್ವಾಂಸರ ಸೇವೆಯನ್ನು ಬಳಸಿಕೊಂಡು ಒಂದು ಸಮಗ್ರ ಅಧ್ಯಯನ ಕೈಕೊಳ್ಳಲು ಸಹಕಾರಿಯಾಯಿತು. ಪ್ರಸ್ತುತ, ಈ ನನ್ನ ಪ್ರಬಂದವು ಈ ಕೆಳಗಿನ ಅಧ್ಯಾಯಗಳನ್ನು ಒಳಗೊಂಡಿದೆ.

ಅಧ್ಯಾಯ ೧ : ಚರಿತ್ರೆ ಅಧ್ಯಯನ

ಪ್ರಸ್ತುತ ಸಂಪ್ರಬಂದದ ಈ ಅಧ್ಯಯವು ಜಗತ್ತಿನ ಆರಂಭದ ಚರಿತ್ರೆಯಿಂದ ಭಾರತದ ಚರಿತ್ರೆ, ಕರ್ನಾಟಕ ಚರಿತ್ರೆ ಮತ್ತು ಬೆಳಗಾವ ಜಿಲ್ಲೆಯ ಚರಿತ್ರೆಯೊಂದಿಗೆ ಚಿಕ್ಕೋಡಿ ತಾಲೂಕಿನ ಐತಿಹಾಸಿಕ

ವಿಷಗಳನ್ನೊಳಗೊಂಡು ಸಮಗ್ರ ತಾಲೂಕಿನ ಚಿತ್ರಣವನ್ನು ನೀಡುತ್ತದೆ.

ಅಧ್ಯಾಯ ೨ : ಚಿಕ್ಕೋಡಿ ತಾಲೂಕಿನ ರಾಜಕೀಯ ಚರಿತ್ರೆ.

ಈ ಅಧ್ಯಾಯವು ಚಿಕ್ಕೋಡಿ ತಾಲೂಕಿನ ಪುರಾತನ ಕಾಲದ ಚಾರಿತ್ರಿಕ ನೆಲೆಗಳಿಂದ ಇಂದಿನ ವರೆಗಿನ ಸಂಪೂರ್ಣ ರಾಜಕೀಯ ಚಿತ್ರಣವನ್ನು ಬಿಂಬಿಸಲಾಗಿದ್ದು ಶಿಲಾಯುಗದ ಸಾಂಸ್ಕೃತಿಯ ಮಾನವನಿಂದ ಶಾತವಾಹನರ ರಾಜಕೀಯ ಆಡಳಿತ, ರಾಷ್ಟ್ರಕೂಟರ ಆಡಳಿತ, ಮರಾಠಾ ಪೇಶ್ವೆಗಳ ಕಾಲದ ರಾಜಕೀಯ ಆಡಳಿತ, ಹಾಗೂ ಬ್ರಿಟೀಶರ ಆಡಳಿತ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಚಿಕ್ಕೋಡಿ ತಾಲೂಕಿನ ಪಾತ್ರವನ್ನು ಬಿಂಬಿಸಲಾಗಿದೆ.

ಅಧ್ಯಾಯ ೩ : ಚಿಕ್ಕೋಡಿ ತಾಲೂಕಿನ ಧಾರ್ಮಿಕ ಚರಿತ್ರೆ.

ಈ ಅಧ್ಯಾಯಲ್ಲಿ ಚಿಕ್ಕೋಡಿ ತಾಲೂಕಿನ ಸಮಗ್ರ ಧಾರ್ಮಿಕ ಅಂಶಗಳನ್ನು ಹೊಂದಿದ್ದು ಈ ತಾಲೂಕಿನಲ್ಲಿ ಹಿಂದೂ, ಮುಸ್ಲಿಂ ಮತ್ತು ಜೈನ ಧರ್ಮಗಳ ಪವಿತ್ರ ಸ್ಥಳಗಳ ವಿವವರಣೆಯೊಂದಿಗೆ ಧಾರ್ಮಿಕ ಸಮನ್ವಯತೆಯನ್ನು ಚಿತ್ರಿಸಲಾಗಿದೆ. ಈ ತಾಲೂಕಿನ ಮಠಗಳು, ನಾಡ ನುಡಿಗಾಗಿ ಶ್ರಮಿಸುತ್ತಿರುವ ಅವುಗಳ ಕಾರ್ಯ ವೈಖರಿಯನ್ನು ಚಿತ್ರಿಸಲಾಗಿದೆ. ಜೈನ ಧರ್ಮದ ಬೆಳವಣಿಗೆಗೆ ಈ ತಾಲೂಕಿನ ಜೈನ ಯತಿಗಳು ವಹಿಸಿದ ಶ್ರಮ ಮತ್ತು ಹಿಂದೂ, ಮುಸ್ಲಿಂ, ಮರಾಠಾ ಧಾರ್ಮಿಕ ಸಂಸ್ಕೃತಿಯ ಸಮನ್ವಯತೆಯನ್ನು ವಿವರಿಸಲಾಗಿದೆ.

ಅಧ್ಯಾಯ ೪ : ಚಿಕ್ಕೋಡಿ ತಾಲೂಕಿನ ಸಾಹಿತ್ಯಿಕ ಚರಿತ್ರೆ.

ಈ ಅಧ್ಯಾಯದಲ್ಲಿ ತಾಲೂಕಿನಲ್ಲಿ ಸಮೃದ್ಧವಾಗಿ ಬೆಳೆದು ಬಂದಿರುವ ಕನ್ನಡ, ಮರಾಠಿ ಸಾಹಿತ್ಯದ ಬೆಳವಣಿಗೆ, ಮತ್ತು ಈ ಎರಡೂ ಭಾಷೆಗಳ ಭಾಂದವ್ಯ ತಾಲೂಕಿನಿಂದ ಪ್ರಕಟವಾದ ಸಾಹಿತ್ಯ ಕೃತಿಗಳು ಮತ್ತು ಜನಪದ ಸಾಹಿತ್ಯದ ವಿಶ್ಲೇಷಣೆ, ನಾಟಕ ಬಯಲಾಟ, ಸಂಶೋಧನೆ, ಮುಂತಾದ ವಿಷಯಗಳನ್ನು ವಿವರಿಸಲಾಗಿದೆ.

ಅಧ್ಯಾಯ ೫ : ಚಿಕ್ಕೋಡಿ ತಾಲೂಕಿನ ಆರ್ಥಿಕ ಚರಿತ್ರೆ.

ಚಿಕ್ಕೋಡಿ ತಾಲೂಕಿನ ಹವಾಗುಣ, ಫಲವತ್ತತೆ, ನೀರಾವರಿ ವ್ಯವಸ್ಥೆ, ಬೆಳೆಗಳು ಪಶು ಸಂಗೋಪಣೆ, ಕೈಗಾರಿಕೆಗಳು, ಮಾರು ಕಟ್ಟೆ, ಸಹಕಾರಿ ಸಂಘಗಳು, ವಾಣಿಜ್ಯ ಬ್ಯಾಂಕುಗಳ ಪಾತ್ರವನ್ನು ವಿವರಿಸುವುದರೊಂದಿಗೆ

ಈ ತಾಲೂಕಿನ ಆರ್ಥಿಕ ಸ್ಥಿತಿ ಗತಿಗಳನ್ನು ವಿವರಿಸಲಾಗಿದೆ.

ಅಧ್ಯಾಯ ೬ : ಚಿಕ್ಕೋಡಿ ತಾಲೂಕಿನ ಶೈಕ್ಷಣಿಕ ಚರಿತ್ರೆ.

ಪ್ರಸ್ತುತ ಈ ಅಧ್ಯಾಯವು ಈ ಪ್ರದೇಶದಲ್ಲಿ ಆರಂಭದ ಶಿಕ್ಷಣದ ಪ್ರದೇಶಗಳ ಮಾಹಿತಿಯನ್ನು ನೀಡುವದರೊಂದಿಗೆ ಆಧುನಿಕ ಮಾದರಿಯ ಶಿಕ್ಷಣದ ಬೆಳವಣಿಗೆಯೊಂದಿಗೆ ಈ ತಾಲೂಕಿನಲ್ಲಿ ಸ್ಥಾಪನೆಯಾಗಿರುವ ಶಿಕ್ಷಣ ಸಂಸ್ಥೆಗಳ ಪಾತ್ರ ಮತ್ತು ಬಹು ಭಾಷಾ ಶಿಕ್ಷಣ ಸಾಮರಸ್ಯತೆಯೊಂದಿಗೆ ರಾಜ್ಯಮಟ್ಟದಲ್ಲಿ ಈ ತಾಲೂಕಿನ ಶಿಕ್ಷಣದ ಗುಣಮಟ್ಟವನ್ನು ತಿಳಿಸಲಾಗಿದೆ.

ಅಧ್ಯಾಯ ೭ : ಸಮಾರೋಪ

ಈ ಅಧ್ಯಾಯವು ಮೇಲಿನ ಎಲ್ಲಾ ಅಧ್ಯಾಯಗಳ ಅಧ್ಯಯನದಿಂದ ಕಂಡು ಬಂದ ವಿಷಯದ ಪರಾಮರ್ಶೆ ಕರ್ನಾಟಕದ ಇತಿಹಾಸದಲ್ಲಿ ಚಿಕ್ಕೋಡಿ ತಾಲೂಕಿನ ಸಚಿತ್ರಣವನ್ನು ತಿಳಿಸುವುದರ ಮುಖಾಂತರ ಈ ಪ್ರಬಂಧವನ್ನು ಅಂತಿಮ ಗೊಳಿಸಲಾಗಿದೆ.

# ಪರಿವಿಡಿ

# ಚರಿತ್ರೆ ಅಧ್ಯಯನ

ಗತಕಾಲದ ಘಟನೆಗಳ ವಸ್ತುಸ್ಥಿತಿಯ ಐತಿಹಾಸಿಕ ಅಧ್ಯಯನವೇ ಒಂದು ಚರಿತ್ರೆ ಇತಿಹಾಸದ ಅರಿವಿಲ್ಲದ ವ್ಯಕ್ತಿ ಮಾತುಬಾರದ ಮೂಕನಿದ್ದಂತೆ, ಇವನು ಸಮಾಜದ ಸಾಂಸ್ಕೃತೀಕರಣಕ್ಕೆ ಒಳಗಾದ ಒಂದು ಪ್ರಾಣಿ. ಪ್ರಾರಂಭದಲ್ಲಿ ಮನುಷ್ಯ ಒಂದು ಮಾಂಸದ ಮುದ್ದೆ. ಸಮಾಜ ಇವನನ್ನು ತನ್ನ ವಿವಿಧ ಪ್ರಕ್ರಿಯೆಯಿಂದಾಗಿ ಸಮಾಜಕ್ಕೆ ಉಪಯೋಗವಾಗುವಂತವನನ್ನಾಗಿ ಮಾಡುತ್ತದೆ.

ಚರಿತ್ರೆಗೂ ಮತ್ತು ಮಾನವನಿಗೆ ಅತಿ ಹತ್ತಿರದ ಸಂಬಂಧವಿದೆ. ಮಾನವನ ಉದಯದಿಂದಲೇ ಚರಿತ್ರೆ ಆರಂಭವಾಯಿತು. ಆದ್ದರಿಂದ ಇತಿಹಾಸವು ಮಾನವನಷ್ಟೇ ಹಳೆಯದು. ಕಾಡು ಸ್ಥಿತಿಯಿಂದ ಮಾನವನು ತನ್ನ ಶತ್ರುಗಳೊಡನೆ ಹೋರಾಡುತ್ತಾ, ಅಲೆದಾಡುತ್ತಾ ಮರಗಳ ತಂಪು ನೆರಳಲ್ಲಿ, ಹೊಳೆಯ ದಂಡೆಗಳಲ್ಲಿ ವಾಸಿಸುತ್ತಾ ನಾಗರಿಕತೆಯನ್ನು ಪ್ರವೇಶಿಸಿದ್ದಾನೆ. ನಾಗರಿಕತೆಯನ್ನು ಪ್ರವೇಶಿಸಿದ ಮಾನವನು ಕೆಲವೇ ಕೆಲವು ಸಂದರ್ಭಗಳಲ್ಲಿ ಅಂದರೆ ದೇವಾಲಯದ ಉತ್ಸವಗಳಲ್ಲಿ, ನದಿ ತೀರದಲ್ಲಿ ಮತ್ತು ತನಗೆ ದಣಿವಾದಾಗ ಮರಗಳ ನೆರಳಲ್ಲಿ ಕುಳಿತು ತನ್ನೊಂದಿಗೆ ಇದ್ದ ಜನರೊಡನೆತನ್ನ ಸಿಹಿ-ಕಹಿ ಅನುಭವಗಳನ್ನು ಹಂಚಿಕೊಳ್ಳುತ್ತಿದ್ದನು. ತಮ್ಮ ಸಾಹಸ ಹಾಗೂ ಸಾಧನೆಗಳನ್ನು ತಿಳಿಯಪಡಿಸಲು ಗುಹೆಗಳಲ್ಲಿ ಒರಟಾಗಿ ಕೆತ್ತನೆಯ ಮೂಲಕ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದರು. ಲಿಪಿಯ ಉಗಮಧಕ್ಕಿಂತ ಮುಂಚೆ ಪದ್ಯ ರೂಪದ ಸಾಹಿತ್ಯ ಪ್ರಚಲಿತವಿತ್ತು. ಬಹುಶಃ ಮಾನವ ವ್ಯಕ್ತಿಗಳಲ್ಲಿ ಗತಕಾಲದ ಅನುಭವಗಳ ಕಥನಕ್ಕೆ ಸಾಮಾಜಿಕ ಗುರಿ ಇರಬೇಕೆಂಬ ಪ್ರಜ್ಞೆ ಮೂಡಿದಾಗ ಗದ್ಯ ರೂಪ ತಲೆದೋರಿರಬೇಕು. ಕಥನವು ಹೆಚ್ಚು ವ್ಯವಹಾರಿಕವಾಗದಂತೆ ಅದನ್ನು ರಚಿಸುವ ಜವಾಬ್ದಾರಿಯನ್ನು ಸಂಕಲನ ಕಸಬಿನವರಿಗೆ ವಹಿಸಿ ಕೊಡಲಾಯಿತು. ಅವರು ಬರೆದದ್ದೆಲ್ಲ ಇತಿಹಾಸವಾಯಿತು.

ಪ್ರಾರಂಭದಲ್ಲಿ ಇತಿಹಾಸ ಗ್ರಂಥ ಅಥವಾ ದಾಖಲೆಗಳ ಪುಸ್ತಕವೆಂದರೆ ಅಧಿಕಾರಿಗಳಿಗೆ ನೀಡಲಾದ ನೀತಿ ಸಂಕಲನವೆಂದು ತೋರುತ್ತಿದೆ[೧].

ಪ್ರಪ್ರಥಮ ಗ್ರೀಕರು ಮತ್ತು ಅಯೋನಿಯಾದ ಜನರು ಯಥಾರ್ಥವಾಗಿ ಇತಿಹಾಸದ ಅಧ್ಯಯನ ಮತ್ತು ಉಗಮಕ್ಕೆ ತಳಹದಿಯನ್ನು ಹಾಕಿದರು. ಗ್ರೀಕ ರಂಗಭೂಮಿಯಲ್ಲಿ ಹೆರೋಡೇಟಸ್‌ನ ಪ್ರವೇಶದಿಂದಾಗಿ ಇತಿಹಾಸವು ಕೇವಲ ಕಲೆ ಸಾಹಿತ್ಯವಾಗಿರದೆ ಪರ್ಶಿಯಾ ಮುಂತಾದ ಬೇರೆ ದೇಶಗಳ ಜನರ ಚರಿತ್ರೆ ತಿಳಿದುಕೊಳ್ಳಲು ಪ್ರಜ್ಞೆ ಮೂಡಿಸಿತು. ಇದರ ನಂತರ ಚರಿತ್ರೆ ತನ್ನ ಸ್ಥಳೀಯ ಚೌಕಟ್ಟಿನಿಂದ ಸರಹದ್ದುಗಳಿಂದಾಚೆ ವಿಸ್ತಾರವಾಯಿತು.

ಇತಿಹಾಸವು ಹಿಂದಿನ ಕಾಲದ ಮಾನವನ ಸೀಮಿತ ಬದುಕಿನ ಜೀವನವನ್ನು ತಿಳಿಸುತ್ತದೆ. ನಂತರ ಅವನ ಕ್ರಿಯಾಶೀಲ ಚಟುವಟಿಕೆಯತ್ತ ಗಮನ ಕೇಂದ್ರೀಕರಿಸಿತು. ಇದಕ್ಕೆ ಮೂಲ ಪ್ರೇರಣಾ ಶಕ್ತಿ ದೇಶ ಎಂದರೆ ಗ್ರೀಕ ದೇಶ ಎಂದು ಹೇಳಬಹುದು.

ವ್ಯಾಪಾರಿಗಳು, ನಾವಿಕರು ಆಗಿದ್ದ ಗ್ರೀಕರು ತಮ್ಮ ಸಾಹಸದ ಸಮಯಗಳನ್ನು ಬರೆಸಿಡಲು ಪ್ರಾರಂಭಿಸಿದರು. ಇದುವೆ ಮುಂದೊಂದು ದಿನ ಅತ್ಯಮುಲ್ಯವಾದ ಚರಿತ್ರೆಯ ನಿರ್ಮಾಣಕ್ಕೆ ದಾರಿಯಾಯಿತು.

ಪ್ರಾಚೀನ ಭಾರತದ ಇತಿಹಾಸವನ್ನು ನಾವು ನಾಗರಿಕತೆಗಳ ಕಾಲಾವಧಿಯಿಂದ ಅಧ್ಯಯನಿಸುತ್ತೇವೆ. ಪ್ರಾಚೀನ ಕಾಲದಿಂದಲೂ ಭಾರತ ಒಂದು ಚರಿತ್ರಾರ್ಹ ದೇಶವಾಗಿದೆ. ಏಕೆಂದರೆ ಜಗತ್ತಿನ ಉಗಮದ ನಾಗರಿಕತೆಗಳ ಮಧ್ಯ ಏಷಿಯಾ ಪ್ರದೇಶದಲ್ಲಿ ಕಂಡು ಬಂದವು, ಅಂತಹ ನಾಗರೀಕತೆಗೆ ಸಮನಾದ ನಾಗರಿಕತೆಯು ಆ ಕಾಲಾವಧಿಯಲ್ಲಿ ಭಾರತದಲ್ಲಿ ನೆಲೆಸಿತು. ಅದುವೇ ಸಿಂಧೂ ಕೊಳ್ಳದ ಸಂಸ್ಕೃತಿ. ಈ ನಾಗರಿಕತೆಯ ಕಾಲಾವಧಿಯ ಸಾಂಸ್ಕೃತಿಕ ಕೊಡುಗೆಗಳನ್ನು ಅವಲೋಕಿಸಿದಾಗ ನಮಗೆ ಆಧುನಿಕ ಕಾಲದ ಮಾನವನ ಬದುಕಿಗೂ ಮತ್ತು ನಾಗರಿಕತೆಯ ಕಾಲಾವಧಿಯ ಮಾನವನ ಬದುಕಿಗೂ ಇರುವ ವ್ಯತ್ಯಾಸ ಗೊತ್ತಾಗುತ್ತದೆ. ನಮ್ಮ ದೇಶವು ಪ್ರಾಚೀನ ಸಂಸ್ಕೃತಿಯ ನೆಲವೀಡು ಸಿಂಧೂ ಸಂಸ್ಕೃತಿಯ ಜನರು ಬದುಕಿ ಬಾಳಿದ ರೀತಿ ನೀತಿಗಳನ್ನು ಅವಲೋಕಿಸಿದರೆ ಆಧುನಿಕ ಜನತೆಯನ್ನು ಬೆರಗುಗೊಳಿಸುವಂತೆ ಜೀವನವನ್ನು ನಡೆಯಿಸಿದ್ದಾರೆ.

ನಂತರ ದಿನಗಳಲ್ಲಿ ಅಂದರೆ ವೇದಗಳ ಕಾಲಾವಧಿಯಲ್ಲಿ ರಾಜನ ಉಗಮ ಮತ್ತು ಬೆಳವಣಿಗೆಯ ಕಲ್ಪನೆ ಮಾಡುತ್ತಾ ಮುಂದೊಂದು ರಾಜ್ಯದ ಉಗಮದೊಂದಿಗೆ ಸಾಮ್ರಾಜ್ಯಗಳು ಹುಟ್ಟಿಕೊಂಡವು. ಭಾರತವನ್ನು ಮೌರ್ಯರಿಂದ ಹಿಡಿದು ಇಂದಿನವರೆಗೆ ಹಲವಾರು ಶ್ರೇಷ್ಠ ರಾಜ್ಯ ಮನೆತನಗಳು ಆಳಿವೆ. ಆ ರಾಜ್ಯ ಮನೆತನಗಳು ವಿಸ್ತಾರಗೊಂಡು ತಮ್ಮ ಆಡಳಿತದ ಪ್ರದೇಶಗಳನ್ನು ವಿಭಾಗ (ಪ್ರಾಂತ) ಮಾಡಿ ಆಳತೊಡಗಿದರು. ಅರಸರ ಅಸಮರ್ಥತೆಯಿಂದ ಆ ಪ್ರಾಂತಗಳ ಪ್ರಾಂತಾಧಿಪತಿಗಳು ಸ್ವತಂತ್ರಗೊಂಡು ತಮ್ಮದೇ ಆದ ಸ್ವತಂತ್ರ ಆಡಳಿತ ವ್ಯವಸ್ಥೆಯನ್ನು ರೂಪಿಸಿಕೊಳ್ಳುತ್ತಿದ್ದರು. ಅಂತಹ ಶ್ರೇಷ್ಠ ರಾಜ ಮನೆತನಗಳು ಈಗಿನ ನಮ್ಮ ಕರ್ನಾಟಕವನ್ನು ಆಳಿವೆ. ಪ್ರಾಚೀನ ಕಾಲದ ಶ್ರೇಷ್ಠ

ಕೃತಿಯಾದ ಕವಿರಾಜಮಾರ್ಗದಲ್ಲಿ ಕರ್ನಾಟಕವು ಒಂದು ಶ್ರೇಷ್ಠ ನಾಡುವಾಗಿದ್ದು ಇದರ ವ್ಯಾಪ್ತಿಯು ಕಾವೇರಿಯಿಮದ ಗೋದಾವರಿಯವರೆಗೆ ಹಬ್ಬಿತ್ತೆಂದು ಹೇಳುತ್ತವೆ.

ಇಂತಹ ಕರ್ನಾಟಕವು ಭಾರತದಲ್ಲಿ ತನ್ನದೇ ಆದ ಸ್ಥಾನಮಾನ ಹೊಂದಿದೆ. ಇಲ್ಲಿ ಹಲವಾರು ರಾಜ ಮನೆತನಗಳು ಆಳಿ ಹೋಗಿವೆ. ಅವರುಗಳಲ್ಲಿ ಪ್ರಮುಖರೆಂದರೆ ಕದಂಬರು, ಶಾತವಾಹನರು, ರಾಷ್ಟ್ರಕೂಟರು, ಬಾದಾಮಿ ಚಾಲುಕ್ಯರು, ಕಲ್ಯಾಣಿ ಚಾಲುಕ್ಯರು, ವಿಜಯನಗರದ ಅರಸರು, ಪೇಶ್ವೆ, ಬಹಮನಿ ಸುಲ್ತಾನಿಗರು, ಸವದತ್ತಿಯ ರಟ್ಟರು, ಮೈಸೂರಿನ ಒಡೆಯರು ಕರ್ನಾಟಕವನ್ನಾಳಿ ನಮ್ಮ ಕನ್ನಡ ನೆಲವನ್ನು ಶ್ರೀಮಂತ ಗೊಳಿಸಿದ್ದಾರೆ. ಇಂತಹ ಕರ್ನಾಟಕವು ಸ್ವಾತಂತ್ರ್ಯಾ ನಂತರ ಆಡಳಿತ ಅನುಕೂಲಕ್ಕೆಂದು ಭಾಷಾವಾರು ಪ್ರಾಂತಗಳ ಆಧಾರದ ಮೇಲೆ ಜಿಲ್ಲಾ ವಿಂಗಡನೆ ಮಾಡಲಾಗಿದೆ. ಆ ಜಿಲ್ಲೆಗಳ ಪೈಕಿ ನಾನು ವಿಶೇಷವಾಗಿ ಅಧ್ಯಯನಕ್ಕೆ ಅಳವಡಿಸಿಕೊಂಡಿರುವ ತಾಲೂಕು, ಬೆಳಗಾವಿ ಜಿಲ್ಲೆಯಲ್ಲಿರುವದರಿಂದ ನಾನು ಕರ್ನಾಟಕ ಚರಿತ್ರೆಯಿಂದ ಬೆಳಗಾವಿಯ ಚರಿತ್ರೆಯೆಡೆಗೆ ಸಾಗುತ್ತಿದ್ದೇನೆ.

ಕರ್ನಾಟಕ ರಾಜ್ಯದಲ್ಲಿಯೇ ಬೆಳಗಾವಿ ಜಿಲ್ಲೆ ನೈಸರ್ಗಿಕ ಅಪಾರ ಸೌಂದರ್ಯವನ್ನು ಹೊಂದಿದ ನಾಡು. ಈ ಜಿಲ್ಲೆಯು ತನ್ನದೆ ಆದ ವೈಶಿಷ್ಟ್ಯತೆಯನ್ನು ಹೊಂದಿದೆ. ಇಲ್ಲಿನ ಜಲಪ್ರಾಂತಗಳು ಜನಮನ ಸೂರೆಗೊಂಡಿವೆ. ಬೆಳಗಾವಿ ಜಿಲ್ಲೆಯ ಗೋಕಾಕದ ಜಲಪಾತವನ್ನು ಕರ್ನಾಟಕದ ನಯಾಗರ ಎಂದು ಕರೆಯುತ್ತಾರೆ[೨]. ಇಲ್ಲಿಯ ನದಿ, ಪರ್ವತಗಳ ಸಾಲು ಸೌಂದರ್ಯದ ಗಣಿಯಾಗಿದೆ. ಈ ಜಿಲ್ಲೆ ಸಕ್ಕರೆ ಉತ್ಪಾದನೆಯಲ್ಲಿ ಕರ್ನಾಟಕದಲ್ಲಿಯೇ ಶ್ರೇಷ್ಠವಾಗಿ ಸಿಹಿನಾಡು ಎಂದು ಕರೆಯಿಸಿಕೊಂಡಿದೆ. ಈ ಜಿಲ್ಲೆ ಸಾಹಿತ್ಯ ಕಲಾವಿದರ ಬೀಡು, ಆಟ, ನಾಟಕಗಳ ಪ್ರಯೋಗರಂಗ ಅಲ್ಲದೆ ಧಾರ್ಮಿಕ ಕ್ಷೇತ್ರಗಳ ತವರೂರು. ಈ ಜಿಲ್ಲೆ ಮಹಾರಾಷ್ಟ್ರದ ಗಡಿಗೆ ಹೊಂದಿಕೊಂಡಿರುವ ಗಡಿ ಜಿಲ್ಲೆಯಾಗಿದೆ. ಈ ಜಿಲ್ಲೆ ಹಲವಾರು ಕೋಟೆ ಕೊತ್ತಲು ಮತ್ತು ವೀರ ಧೀರರ ನಾಡಾಗಿದ್ದು ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಭಾರತದ ಗಮನ ಸೆಳೆಯುವ ನಾಡಾಗಿದ್ದು ಇಲ್ಲಿ ಬ್ರಿಟೀಷರ ವಿರುದ್ಧ ಹೋರಾಡಿದ ವೀರ ವನಿತೆ ಕಿತ್ತೂರ ಚನ್ನಮ್ಮ ಹಾಗೂ ಆಕೆಯ ಧೀಮಂತ ನಾಯಕ ಸಂಗೊಳ್ಳಿ ರಾಯಣ್ಣನಂತವರನ್ನು ಕಂಡ ಈ ನೆಲ "ಗಂಡು ಮೆಟ್ಟಿನ ಬೀಡು" ಇದಾಗಿದೆ. ಬೆಳಗಾವಿ ಜಿಲ್ಲೆಯು ಐತಿಹಾಸಿಕ, ಪುರಾತನ ನೆಲೆಬೀಡಾಗಿದ್ದು ಪ್ರಾಚೀನ ಆದಿ ಮಾನವನ ನೆಲೆಗಳಿಂದ ರಾಜ ಮಹಾರಾಜರ ಕಾಲಾವಧಿಯ ಸ್ಮಾರಕಗಳನ್ನು ಇಲ್ಲಿ ಕಾಣಬಹುದಾಗಿದೆ. ಬೆಳಗಾವಿ ಜಿಲ್ಲೆಯನ್ನು ಹಿಂದಿನ ಕಾಲದಲ್ಲಿ ಕುಂತಲನಾಡು, ಕುಂದರನಾಡು, ಕುಹುಂಡಿ ಮೂಸಾಸಿರ ಪ್ರದೇಶ ಎಂದು ಕರೆಯಲಾಗುತ್ತಿತ್ತು. ಬೆಳಗಾವಿ ಜಿಲ್ಲೆಯಲ್ಲಿ ಅಳಿದುಳಿದ ಐತಿಹಾಸಿಕಪ್ರಾಚೀನ ಸ್ಮಾರಕಗಳೆ ಉದಾಹರಣೆಯಾಗಿವೆ. ಪ್ರಾಚೀನ ಕಾಲಾವಧಿಯ ಕೋಟೆ ಕೊತ್ತಲಗಳು, ವಾಡೆಗಳು, ಬಸದಿಗಳು, ಮಠಗಳು,

ದೇವಾಲಯಗಳು, ಮಸೀದಿಗಳು, ಶಕ್ತಿ ಪೀಠಗಳು, ಸಿದ್ಧ ಕ್ಷೇತ್ರಗಳು ಉತ್ತಮ ನಿದರ್ಶನಗಳಾಗಿವೆ.

ಈ ಜಿಲ್ಲೆ ಕರ್ನಾಟಕವನ್ನಾಳಿದ ಅಚ್ಚ ಕನ್ನಡದ ಅರಸರಾದ ರಟ್ಟರು ಅಥವಾ ರಾಷ್ಟ್ರಕೂಟರ ಕೇಂದ್ರಸ್ಥಾನವಾಗಿತ್ತು. ಈ ಜಿಲ್ಲೆಯನ್ನು ಹಲಸಿಯ ಕದಂಬರು, ದೇವಗಿರಿಯ ಯಾದವರು, ಕಳಚೂರ್ಯರು, ವಿಜಯನಗರ ಅರಸರು ಬಹುಮನಿ ಸುಲ್ತಾನರು. ಆದಿಲ್ ಶಾಹಿಗಳು, ಮರಾಠರು ಈ ಪ್ರದೇಶವನ್ನು ಆಳಿದ್ದಾರೆ. ಬ್ರಿಟೀಷರ ವಿರುದ್ಧ ಬಂಡೆದ್ದ ಈ ಪ್ರದೇಶ "ಗಂಡು ಮೆಟ್ಟಿನ" ಸ್ಥಳ ಎಂದೇ ಪ್ರಸಿದ್ಧಿ ಪಡೆದಿದೆ. ರಾಷ್ಟ್ರದ ಶ್ರೇಷ್ಠ ನೇತಾರ ಮತ್ತು ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರಿಗೂ, ಈ ಜಿಲ್ಲೆಗೂ ನಿಕಟವಾದ ಸಂಬಂಧವಿದೆ. ಗಾಂಧೀಜಿಯವರು ತಮ್ಮ ಜೀವಮಾನದಲ್ಲೇ ಒಂದೇ ಒಂದು ಸಲ ಕಾಂಗ್ರೇಸ್ ಅಧಿವೇಶನದ ಅಧ್ಯಕ್ಷತೆಯನ್ನು ವಹಿಸಿದ್ದು ಅದು ಬೆಳಗಾವಿಯ ಅದಿವೇಶನದಲ್ಲಿ, ಅದು ೧೯೨೪ ರಲ್ಲಿ ಜರುಗಿತು.

ಬೆಳಗಾವಿ ಜಿಲ್ಲೆ ಸ್ವಾತಂತ್ರ್ಯ ಕಲಿಗಳಾದ ಗಂಗಾಧರರಾವ ದೇಶಪಾಂಡೆ, ಅಣ್ಣು ಗುರೂಜಿ, ವಾಲಿ ಚನ್ನಪ್ಪರಂತಹ ಸ್ವಾತಂತ್ರ್ಯ ಹೋರಾಟಗಾರರನ್ನು ಕಂಡ ನಾಡಿದು. ಇಂದಿಗೂ ಭಾರತೀಯ ಸೈನ್ಯದಲ್ಲಿ ಬೆಳಗಾವಿ ಜಿಲ್ಲೆಯ ಯೋಧರು ಮುಂಚೂಣಿ ಪಡೆಯಲ್ಲಿದ್ದಾರೆ.

ಕರ್ನಾಟಕ ಏಕೀಕರಣ,. ನಾಡುನುಡಿಗಾಗಿ ಹೋರಾಡಿದ ಈ ಜಿಲ್ಲೆಯ ಮಹನೀಯರ ಸಾಧನೆ ಶ್ಲಾಘನೀಯ. ಇಂದಿಗೂ ಸಹ ಕನ್ನಡವನ್ನು ಕಾಯುವ ಮತ್ತು ಕನ್ನಡ ಭಾಷೆಯನ್ನು ಬೆಳೆಸುವತ್ತ ಹಲವಾರು ಸಂಘ ಸಂಸ್ಥೆಗಳು ತಮ್ಮದೇ ಆದ ನಿಟ್ಟಿನಲ್ಲಿ ಕಾರ್ಯ ಮಾಡುತ್ತಿವೆ. ಅಂತಹವುಗಳಲ್ಲಿ ಕೆ. ಎಲ್. ಇ. ಶಿಕ್ಷಣ ಸಂಸ್ಥೆಯು 'ಕನ್ನಡದ ಕೋಟೆ' ಎನಿಸಿದೆ. ಬೆಳಗಾವಿಯ ರುದ್ರಾಕ್ಷಿ ಮಠ, ಕಾರಂಜಿ ಮಠ ಸಾವಳಗಿಯ ಶಿವಲಿಂಗೇಶ್ವರ ಮಠ, ಮತ್ತು ಚಿಂಚಣಿಯ ಸಿದ್ಧ ಸಂಸ್ಥಾನ ಮಠಗಳು ಕನ್ನಡ ಮಠಗಳೆಂದೇ ಹೆಸರು ಪಡೆದಿವೆ. ಯಕ್ಸಂಬಾದ ಗೆಳೆಯರ ಬಳಗ ಈ ಸಾಧನೆಯಲ್ಲಿ ಉಲ್ಲೇಖನೀಯ.

ಕನ್ನಡ – ಮರಾಠಿ ಭಾಷಾ ಸಂಸ್ಕೃತಿಗಳ ಸೌಹಾರ್ದದ ತಾಣವಾಗಿಯೂ ಬೆಳಗಾವಿ ಜಿಲ್ಲೆಯು ಹೆಸರು ಪಡೆದಿದೆ. ಇಲ್ಲಿಯ ಕನ್ನಡ – ಮರಾಠಿ ಜನರ ರೀತಿ-ರಿವಾಜು, ದೇವ-ದೇವತೆಗಳ ಆರಾಧನೆ, ಕಲೆ ಸಾಹಿತ್ಯ ಮುಂತಾದ ವಿಷಯಗಳಲ್ಲಿ ಗಾಢವಾದ ಬಾಂಧವ್ಯವನ್ನು ಕಾಣಬಹುದು.

ಬೆಳಗಾವ ಜಿಲ್ಲೆಯು ಛತ್ರಪತಿ ಶಿವಾಜಿ ಮಹಾರಾಜರ ಆಡಳಿತದ ವ್ಯಾಪ್ತಿಗೆ ಒಳಪಟ್ಟಿತ್ತು. ಬೆಳವಡಿ ಮಲ್ಲಮ್ಮ ಹಾಗೂ ಶಿವಾಜಿಯರ ನಡುವೆ ನಡೆದ ಯುದ್ಧದಲ್ಲಿ ಈರ್ವರ ಮಧ್ಯೆ ಶಾಂತಿಸಂಧಾನ ಏರ್ಪಟ್ಟಿತ್ತು. ಮರಾಠಿ ಭಾಷೆಯ ಚಿಕ್ಕೋಡಿ ರಂಗಭೂಮಿಯ ಪಿತಾಮಹನಾದ ಅಣ್ಣಾಸಾಹೇಬ ಕಿರ್ಲೋಸ್ಕರರು ಹುಟ್ಟಿದ್ದು ಬೆಳಗಾವಿ ಜಿಲ್ಲೆಯ

ಗುರ್ಲಹೊಸೂರಿನಲ್ಲಿ.

ಶ್ರೇಷ್ಠ ಸಂಗೀತಗಾರರಾದ ಕುಮಾರ ಗಂಧರ್ವರು ಹುಟ್ಟಿದ ನಾಡು ಬೆಳಗಾವಿ ಜಿಲ್ಲೆಯ ಸುಳೇಭಾವಿಯಲ್ಲಿ. ಶ್ರೇಷ್ಠ ಅಭಿನೇತ್ರಿ ಸುಲೋಚನಾ ಜನಿಸಿದ್ದು ಬೆಳಗಾವಿ ಜಿಲ್ಲೆಯ ಖಡಕಲಾಟದಲ್ಲಿ.

ಕನ್ನಡ ಸಾಹಿತ್ಯ ಪರಂಪರೆಗೆ ಶ್ರೀಮಂತ ಕಾಣಿಕೆಯನ್ನುನೀಡಿದ ನಾಡು ಬೆಳಗಾವಿ ಜಿಲ್ಲೆ. ಪ್ರಾಚೀನ ಸಾಹಿತಿಗಳಿಂದ ರುದ್ರಭಟ್ಟ, ಶ್ರೀಧರ ಕವಿ, ಪಾರ್ಶ್ವಪಂಡಿತ, ನೇಮಿಚಂದ್ರ, ರಾಜಾದಿತ್ಯ ಮುಂತಾದ ಉದ್ದಾಮ ಕವಿಗಳನ್ನು ಹೊಂದಿದ ಜಿಲ್ಲೆ ಬೆಳಗಾವಿ ಆಧುನಿಕ ಸಾಹಿತಿಗಳಾದ ಗಂಗಾಧರ ಮಡಿವಾಳೇಶ್ವರ - ತುರುಮರಿ, ಶ್ರೇಷ್ಠ ಗಿರಿರಾಯರು, ಸಂಶೋಧನಾ ಕ್ಷೇತ್ರದ ಉದ್ದಾಮರಾದ ಶಿ. ಚೆ. ನಂದಿಮಠ, ಕೆ . ಜಿ. ಕುಂದಣಗಾರ, ಆ. ನೆ. ಉಪಾಧ್ಯೆ, ಶಂಭಾ ಜೋಷಿ ಮುಂತಾದವರು ಶ್ಲಾಘನೀಯ ಸೇವೆಗೈದಿದ್ದಾರೆ.

ಶ್ರೇಷ್ಠ ಕಾವ್ಯ – ಕಥೆ ಕಾದಂಬರಿಕಾರರಾದ ಬೆಟಗೇರಿ ಕೃಷ್ಣಶರ್ಮ, ಕೃಷ್ಣಮೂರ್ತಿ ಪುರಾಣಿಕ, ಬಸವರಾಜ ಕಟ್ಟಿಮನಿ, ಮಿರ್ಜಿ ಅಣ್ಣಾರಾಯ, ಡಿ. ಎಸ್. ಕರ್ಕಿ, ಎಸ್. ಡಿ. ಇಂಚಲ, ಭುಜೇಂದ್ರ ಮಹಿಷವಾಡಗಿ ಬುದ್ಧಣ್ಣ ಹಿಂಗಮಿರೆ ಡಾ. ಚಂದ್ರಶೇಖರ ಕಂಬಾರರಂಥವರು ಕಾದಂಬರಿಯಲ್ಲಿ ಮಿಂಚಿದ್ದಾರೆ. ರಂಗಭೂಮಿಯಲ್ಲಿ ಸಣ್ಣಾಟ, ದೊಡ್ಡಾಟಗಳ ತವರುಮನೆ ಬೆಳಗಾವಿ ಜಿಲ್ಲೆ. ಇಲ್ಲಿ ಹಲವಾರು ನಾಟಕ ಕಂಪನಿಗಳಾಗಿ ವೃತ್ತಿ ರಂಗಭೂಮಿಯಲ್ಲಿ ಮಿಂಚಿವೆ. ಚಿಕ್ಕೋಡಿಯ ಶಿವಲಿಂಗ ಸ್ವಾಮಿಗಳು ಸ್ವಾತಂತ್ರ್ಯ ಚಳುವಳಿಯಲ್ಲಿ ಜನರಲ್ಲಿ ರಾಷ್ಟ್ರೀಯ ಭಾವನೆಗಳನ್ನು ತುಂಬಲು "ಕಿತ್ತೂರು ಚನ್ನಮ್ಮ"ಳನ್ನು ಕುರಿತು ನಾಟಕ ಬರೆದರು. ಇವರ ಕಂಪನಿಯಲ್ಲಿ ನಾಟ್ಯಭೂಷಣ ನಾಡೋಜ ಏಣಗಿ ಬಾಳಪ್ಪನವರಿದ್ದರು. ಇನ್ನೂ ಹಲವಾರು ನಾಟಕ ಕಂಪನಿಗಳು ಈ ಜಿಲ್ಲೆಯಲ್ಲಿ ಪ್ರಸಿದ್ದವಾಗಿದ್ದವು. ಈ ನಾಟಕ ಕಂಪನಿಗಳು ಜಿಲ್ಲೆಯ ರಂಗಭೂಮಿಗೆ ಮೆರಗು ತಂದುಕೊಟ್ಟಿವೆ. ಸಾವಿರ ಹಾಡಿನ ಸರದಾರ ಎಂದೇ ಪ್ರಖ್ಯಾತಿ ಗಳಿಸಿದ ಶ್ರೇಷ್ಠ ಹಾಡುಗಾರರಾದ ಹುಕ್ಕೇರಿ ಬಾಳಪ್ಪನವರು ಈ ನೆಲದವರೇ ಆಗಿದ್ದಾರೆ. ಇಂತಹ ಹೆಸರಾಂತ ಕಲಾವಿದರನ್ನು ಹೊಂದಿದ ಬೀಡು ಬೆಳಗಾವಿ ಜಿಲ್ಲೆ ತನ್ನ ವ್ಯಾಪ್ತಿಯಿಂದ ಹೊರಗೂ ಸಹ ತನ್ನ ಶ್ರೇಷ್ಠತೆಯನ್ನು ಗಳಿಸಿದೆ.

ಬೆಳಗಾವಿ ಜಿಲ್ಲೆ ಹಲವಾರು ಪ್ರೇಕ್ಷಣೀಯ ಸ್ಥಳಗಳ ಪ್ರದೇಶವಾಗಿದೆ. ಈ ಜಿಲ್ಲೆಯ ಸವದತ್ತಿಯ ಎಲ್ಲಮ್ಮಾ ದೇಶದ ತುಂಬೆಲ್ಲಾ ಚಿರ ಪರಿಚಿತವಾದ ಶಕ್ತಿ ದೇವತೆ, ಈ ಶಕ್ತಿ ದೇವತೆಯ ಆರಾಧಕರು ಕರ್ನಾಟಕ ಪ್ರದೇಶದಾಚೆಯೂ ಹರಡಿಕೊಂಡಿದ್ದಾರೆ. ಈ ದೇವತೆಯೊಂದಿಗೆ ಈ ಜಿಲ್ಲೆಯಲ್ಲಿ ಇನ್ನೊಂದು ಶಕ್ತಿ ಆರಾಧನಾ ದೇವತೆಯೆಂದರೆ ರಾಯಬಾಗ ತಾಲೂಕಿನ ಚಿಂಚಲಿಯ ಮಾಯಕ್ಕಾ, ಇವಳ ಆರಾಧನೆ ಜಿಲ್ಲೆಯ ಹಾಗೂ ರಾಜ್ಯದ ಜನತೆಗಿಂತ ಹೊರ ರಾಜ್ಯದ ಭಕ್ತರನ್ನು ಆಕರ್ಷಿಸಿದ್ದಾಳೆ. ಅಲ್ಲದೆ ಶಕ್ತಿ ದೇವತೆಯ

ಜಾತ್ರಾ ಮಹೋತ್ಸವ ವರ್ಷದಲ್ಲಿ ಒಂದು ತಿಂಗಳವರೆಗೆ ಜರುಗುವ ಬೃಹತ್ ಜಾತ್ರೆಯಾಗಿದೆ. ಮುಗಳಖೋಡದ ಯಲ್ಲಾಲಿಂಗ ಹಾಗೂ ಹಾರೂಗೇರಿಯ ಶ್ರೀವೃಷಭೇಂದ್ರ, ಖಿಳೇಗಾಂವದ ಬಸವಣ್ಣ ಶ್ರೇಷ್ಠ ಆರಾಧನಾ ಸ್ಥಳಗಳಾಗಿವೆ.

ಈ ಜಿಲ್ಲೆ ಕಿತ್ತೂರು ಚೆನ್ನಮ್ಮಳ ತವರು ಮನೆಯಾದ ಕಾಕತಿಯು ನಿಸರ್ಗಧಾಮವನ್ನು ಹೊಂದಿದ್ದು, ಜಿಲ್ಲೆಯ ಸುಳೆಬಾವಿ ಖ್ಯಾತ ಸಂಗಿತಗಾರ ಕುಮಾರ ಗಂಧರ್ವರ ಜನ್ಮಸ್ಥಳ, ಶ್ರೀರಾಮನಿಗೆ ಬೊರೇಹಣ್ಣು ತಿನ್ನಿಸಿದ ಶಬರಿಯ ಊರು ಸುರೇಬಾನ ಈ ಜಿಲ್ಲೆಯಲ್ಲಿದೆ. ಈಶ್ವರನ ಪ್ರತಿರೂಪ ಸೂಚಿಸುವ ಸೊಬಗಿನ ಸೊಗಲು ಈ ಜಿಲ್ಲೆಯ ಬೈಲಹೊಂಗಲ ತಾಲೂಕಿನಲ್ಲಿದೆ. ಶ್ರೇಷ್ಠ ದಾನಿ ಹಾಗೂ ಕಾಳಿಕಾ ದೇವಿಯ ಆರಾಧನಾ ತಾಣವಾಗಿರುವ ಶಿರಸಂಗಿ ರಾಮದುರ್ಗ ತಾಲೂಕಿನಲ್ಲಿದೆ. ಕದಂಬರ ಕಾಲಾವಧಿಯ ಶಿಲ್ಪ ಕಲೆಯ ಕ್ಷೇತ್ರ ಹಾಗೂ ಆರಾಧನಾ ಸ್ಥಳಗಳಾದ ಹಲಸಿ, ದೇಗಾಂವ, ದೇಗುಲಹಳ್ಳಿ ಹಾಗೂ 'ನಾಥ' ಸಂಪ್ರದಾಯ ಶ್ರೇಷ್ಠ ಕೇಂದ್ರ ಹಂಡಿಬಡಗನಾಥ ಮಲಪ್ರಭೆಯ ಉಗಮದ ಸ್ಥಳ ಕಣಕುಂಬಿ ಮತ್ತು ಜಿಲ್ಲೆಯ ಖಾನಾಪೂರ ತಾಲೂಕು ನಿಸರ್ಗಧಾಮದಂತೆ ಕಂಗೊಳಿಸುತ್ತಿದ್ದು ಇಲ್ಲಿ ಹಲವಾರು ಔಷಧೀಯ ಹಾಗೂ ಜನೋಪಯೋಗಿ ಮರಗಳನ್ನು ಕಾಣುತ್ತೇವೆ ಈ ರೀತಿಯಾದ ನಿಸರ್ಗದ ಸೌಂದರ್ಯದ ಗಣಿಯಾದ ಬೆಳಗಾವಿ ಜಿಲ್ಲೆ ಪ್ರವಾಸಿಗರನ್ನು ಹಾಗೂ ದೇವಾನು ದೇವತೆಗಳ ಆರಾಧಕರನ್ನು ಕೈಬೀಸಿ ಕರೆಯುತ್ತಿದೆ.

ಬೆಳಗಾವಿ ಜಿಲ್ಲೆಯು ತನ್ನದೇ ಆದ ಚರಿತ್ರೆಯನ್ನು ಹೊಂದಿದ್ದು ರಾಜ್ಯದ ಅತ್ಯಂತ ಹಳೆಯ ಪಟ್ಟಣಗಳಲ್ಲಿ ಬೆಳಗಾವಿಯು ಒಂದು. ಬೆಳಗಾವಿ ತನ್ನ ಪ್ರಾಚೀನ ಚರಿತ್ರೆಯನ್ನು ಸೂಸಲು ಬೆಳಗಾವಿಯ ಕೋಟೆಯೇ ಇದಕ್ಕೆ ಸಾಕ್ಷಿಯಾಗಿದೆಯಲ್ಲದೆ ಇದು ಬಹು ಸಂಸ್ಕೃತಿಗಳ ನಗರ ಎಂದೆ ಪ್ರಸಿದ್ಧವಾಗಿದೆ. ಈ ನಗರಕ್ಕೆ ಸ್ವಾಮಿ ವಿವೇಕಾನಂದ, ಲೋಕಮಾನ್ಯ ಟಿಳಕ ಮತ್ತು ಮಹಾತ್ಮಾ ಗಾಂಧೀಜಿಯವರು ಭೆಟ್ಟಿ ನೀಡಿದ್ದಾರೆ. ಈ ರೀತಿಯಾಗಿ ಜಿಲ್ಲೆಯು ತನ್ನದೆ ಆದ ವೈಶಿಷ್ಠತೆಯೊಂದಿಗೆ ಜಾಗತಿಕ ಮಟ್ಟದಲ್ಲಿ ಆಧುನಿಕತೆಯತ್ತ ದಾಪುಗಾಲುಡುತ್ತಿರುವ ಕರ್ನಾಟಕ ದಲ್ಲಿಯೇಶ್ರೇಷ್ಠ ವೈದ್ಯಕೀಯ ಸೇವೆ ಸಲ್ಲಿಸುತ್ತಿರುವ ಕೆ. ಎಲ್. ಇ. ಸಂಸ್ಥೆಯ ಡಾ. ಪ್ರಭಾಕರ ಕೋರೆ ಆಸ್ಪತ್ರೆಯು ಹೊಸ ಹೊಸ ವೈದ್ಯ ವಿಜ್ಞಾನಕ್ಕೆ ಸವಾಲಾಗಿರುವ ಶ್ರೇಷ್ಠವಾದ ವೈದ್ಯಕೀಯ ಸಮಸ್ಯೆಗಳನ್ನು ಸರಿದೂಗಿಸಲು ದೇಶ ವಿದೇಶದ ವೈದ್ಯ ವೃಂದವನ್ನು ಹೊಂದಿದೆ.

ಬೆಳಗಾವಿ ಜಿಲ್ಲೆಯು ಆರ್ಥಿಕವಾಗಿ ಸಬಲವಾಗಿದೆ; ಸಂಪನ್ನವಾಗಿದ್ಲೆ ಮಲೆನಾಡು ಗಡಿನಾಡು, ಬಯಲು ಸೀಮೆಯನ್ನು ಹೊಂದಿದ್ದರಿಂದ ಕಬ್ಬು, ಜೋಳ ಮತ್ತು ಬೇಳೆಕಾಳುಗಳನ್ನು ಬೆಳೆಯಲು ಯೋಗ್ಯವಾದ ಪ್ರದೇಶ ಬೆಳಗಾವಿ ಜಿಲ್ಲೆಯಾಗಿದೆ.

ಬೆಳಗಾವಿ ಜಿಲ್ಲೆಯು ಸುಂದರ ಸೊಬಗಿನ ತಾಣವಾಗಿದ್ದು ವಾಸ್ತವವಾಗಿ ಇದು ಕರ್ನಾಟಕದಲ್ಲಿನ ಅತಿ ದೊಡ್ಡ ಜಿಲ್ಲೆಗಳಲ್ಲಿ ಒಂದಾಗಿದ್ದು ಈ ಜಿಲ್ಲೆಯು ಸುಮಾರು ೧೦

ತಾಲೂಕುಗಳನ್ನು ಒಳಗೊಂಡಿದೆ. ಅವುಗಳೆಂದರೆ, ಅಥಣಿ, ಚಿಕ್ಕೋಡಿ,ಹುಕ್ಕೇರಿ, ರಾಯಬಾಗ,ಗೋಕಾಕ, ರಾಮದುರ್ಗ, ಬೈಲಹೊಂಗಲ, ಸವದತ್ತಿ, ಖಾನಾಪೂರ, ಬೆಳಗಾವಿ. ನಾನು ನನ್ನ ಅಧ್ಯಯನಕ್ಕೆ ಒಳಪಡಿಸಿಕೊಂಡಿರುವ ತಾಲೂಕು ಈ ಹತ್ತು ತಾಲೂಕುಗಳಪೈಕಿ ಒಂದಾಗಿದ್ದು ಅದುವೇ ಚಿಕ್ಕೋಡಿ ತಾಲೂಕು ಇದು ಪ್ರಸ್ತುತ ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆಯಾಗಿ ಕಾರ್ಯ ನಿರ್ವಹಿಸುತ್ತಿದೆ.

ಚಿಕ್ಕೋಡಿ ತಾಲೂಕಿನ ಸಾಂಸ್ಕೃತಿಕ ಅಧ್ಯಯನವು ಈ ಪ್ರಬಂಧದ ಕೇಂದ್ರ ಬಿಂದುವಾಗಿದ್ದು ಆದ್ದರಿಂದ ನಾನು ನೇರವಾದ ವಿಷಯಗಳನ್ನು ಪ್ರಸ್ತಾಪಿಸುವದಕ್ಕಿಂತ ಮುಂಚೆ ಚಿಕ್ಕೋಡಿ ತಾಲೂಕಿನ ಹಿನ್ನೋಟವನ್ನು ಅವಲೋಕಿಸುವುದು ಅವಶ್ಯಕವಾಗಿದೆ.

ಚಿಕ್ಕೋಡಿ ತಾಲೂಕವು ಬೆಳಗಾವಿ ಜಿಲ್ಲೆಯ ವಾಯವ್ಯ ಭಾಗದಲ್ಲಿದೆ. ಈ ತಾಲೂಕು ಭೌಗೋಳೀಕವಾಗಿ ತನ್ನದೇ ಆದ ವಿಶೇಷತೆಯನ್ನು ಹೊಂದಿದೆ. ಈ ತಾಲೂಕಿನ ಪೂರ್ವ ದಿಕ್ಕಿಗೆ ಅಥಣಿ, ರಾಯಭಾಗ ಮತ್ತು ಗೋಕಾಕ, ದಕ್ಷಿಣ ದಿಕ್ಕಿಗೆ ಹುಕ್ಕೇರಿ ತಾಲೂಕನ್ನು ಹೊಂದಿದೆ.[೩]

ಈ ತಾಲೂಕವು ೧೦೩ ಹಳ್ಳಿಗಳನ್ನೊಳಗೊಂಡಿದ್ದು ೪ ಹೋಬಳಿಗಳನ್ನೊಳಗೊಂಡ ಸುಂದರ ಬೃಹತ್ ತಾಲೂಕಾಗಿದೆ. ಈ ತಾಲೂಕಿನ ಒಟ್ಟು ವಿಸ್ತೀರ್ಣ ೮೪೦ ಚೌರಸ್ ಮೈಲುಗಳಾಗಿದೆ ೨೦೦೧ರ ಜನಗಣತಿ ಪ್ರಕಾರ ಈ ತಾಲೂಕಿನ ಒಟ್ಟು ಜನಸಂಖ್ಯೆ ೫,೬೭,೬೦೧ ಇದೆ. ಈ ತಾಲೂಕು ವಾರ್ಷಿಕ ೬೩೨೧.೮ ಮಿಲಿ ಮೀಟರಗಳಷ್ಟು ಮಳೆ ಪ್ರಮಾಣವನ್ನು ಹೊಂದಿದೆ. ಇಲ್ಲಿಯ ವಾರ್ಷಿಕ ಸರಾಸರಿ ಮಳೆ ೯೭೨.೬ ಮಿಲಿ ಮೀಟರಗಳು: ಈ ತಾಲೂಕವು ಸಮುದ್ರಮಟ್ಟದಿಂದ ೭೫೩ ಮೀಟರ ಎತ್ತರದಲ್ಲಿದ್ದು ಹಿತಕರವಾದ ಸಾಮಾನ್ಯ ಹವಾಗುಣವನ್ನು ಹೊಂದಿದ ಪ್ರದೇಶವಾಗಿದೆ. ತಾಲೂಕಿನ ಪಶ್ಚಿಮ ಭಾಗದಲ್ಲಿ ಗುಡ್ಡಗಳ ಶ್ರೇಣಿ ಇದ್ದು ಈ ಗುಡ್ಡಗಳು ಚಿಕ್ಕೋಡಿ ನಗರದ ವರೆಗೂ ವ್ಯಾಪಿಸಿದೆ. ಈ ಗುಡ್ಡಗಾಡು ಪ್ರದೇಶ ಸಾಧಾರಣ ಎತ್ತರವಾಗುವ ಮರಗಳನ್ನು ಹೊಂದಿವೆ. ಈ ತಾಲೂಕು ಸುಮಾರು ೫೪೭ ಹಕ್ಟೇರಗಳಷ್ಟು ಅರಣ್ಯ ಪ್ರದೇಶ ಹೊಂದಿದೆ. ಚಿಕ್ಕೋಡಿಯ ಸುತ್ತ ಮುತ್ತಲು ಇರುವ ಅರಣ್ಯ ಪ್ರದೇಶದಲ್ಲಿ ಕುರಚಲು ಸಸ್ಯಗಳು ಬೆಳೆಯುತ್ತವೆ. ಹಿಂದಿನ ಕಾಲಾದಲ್ಲಿ ಈ ಕಾಡುಗಳಲ್ಲಿ ಕಾಡುಪ್ರಾಣಿಗಳಿದ್ದದ್ದರಿಂದ ಈ ಪ್ರದೇಶ ಬೇಟೆಯ ತಾಣವು ಆಗಿತ್ತು.

ಈ ತಾಲೂಕಿನಲ್ಲಿ ಲಾಭ ತರುವ ಖನಿಜಗಳು ಸಿಗುವ ಬಗ್ಗೆ ವರದಿಯಾಗಿಲ್ಲ. ಈ ಪ್ರದೇಶ ಕೇವಲ ಕೃಷಿಗೆ ಯೋಗ್ಯವಾದ ಜಮೀನನ್ನು ಹೊಂದಿದೆಯಲ್ಲದೆ ಫಲವತ್ತಾದ ಕಪ್ಪು ಮತ್ತು ಕೆಂಪು ಮಿಶ್ರಿತ ಮಣ್ಣನ್ನು ಹೊಂದಿದೆ. ಇಲ್ಲಿಯ ಮಣ್ಣು ದಪ್ಪ ಪದರಿನ ಕಪ್ಪು ಮಣ್ಣಾಗಿದೆ. ಕೆಂಪು ಮಣ್ಣಿನ ಮಿಶ್ರಣದಿಂದ ಕೂಡಿದೆ. ಈ ರೀತಿಯಾದ ಚಿಕ್ಕೋಡಿಯು ' ಅನಾದಿಕಾಲದಿಂದಲೂ ತನ್ನದೇ ಆದ ಚಾರಿತ್ರಿಕ ಪರಂಪರೆಯನ್ನು ಹೊಂದಿದೆ.

ಚಿಕ್ಕೋಡಿ ತಾಲೂಕು ಮೌರ್ಯರ, ಶಾತವಾಹನರ, ರಟ್ಟರ, ಯಾದವರ, ಬಹುಮನಿ ಸುಲ್ತಾನರ ಮತ್ತು ದೆಹಲಿಯ ಖಿಲ್ಜಿ, ತುಘಲಕ್, ಮರಾಠಾ ಮತ್ತು ಪೇಶ್ವೆಯರ ಆಡಳಿತಕ್ಕೆ ಒಳಪಟ್ಟಿತ್ತೆಂದು ಹೇಳಬಹುದು. ಪೇಶ್ವೆಯರ ಕಾಲಾವಧಿಯಲ್ಲಿ ಈ ಭಾಗದಲ್ಲಿ ಸಂಸ್ಥಾನಿಕರಿದ್ದರು. ಈ ಸಂಸ್ಥಾನಿಕರು ಚಿಕ್ಕೋಡಿ ಪ್ರದೇಶಕ್ಕೆ ತಮ್ಮದೇ ಆದ ರಾಜಕೀಯ, ಧಾರ್ಮಿಕ ಆರ್ಥಿಕ ಕೊಡುಗೆಗಳನ್ನು ನೀಡಿದ್ದಾರೆ.

೧೮೨೭ರಲ್ಲಿ ಕೊಲ್ಲಾಪೂರದ ಅರಸರೊಡನೆ ಮಾಡಿಕೊಂಡ ಮಾಡಿಕೊಂಡ ಒಪ್ಪಂದದಿಂದಾಗಿ ಚಿಕ್ಕೋಡಿ ಪ್ರದೇಶವು ಬ್ರಿಟೀಶರ ಆಧೀನವಾಯಿತು. ನಂತರ ಆಡಳಿತದ ಅನುಕೂಲತೆಗಾಗಿ ಧಾರವಾಡದ ಕಲೆಕ್ಟರ ಆಫೀಸನ್ನು ಎರಡು ಭಾಗಗಳಾಗಿ ವಿಂಗಡಿಸಲಾಯಿತು. ಆ ಸಂದರ್ಭದಲ್ಲಿಯೇ ಚಿಕ್ಕೋಡಿಯು ಒಂದು ಹೊಸ ತಾಲೂಕಾಗಿ ಉಗಮವಾಯಿತು. ಆಗ ಹೊಸದಾಗಿ ನಿರ್ಮಾಣವಾದ ಬೆಳಗಾವಿ ಜಿಲ್ಲೆ ಹೊಸದಾಗಿ ರಚಿತವಾದ ಚಿಕ್ಕೋಡಿ ತಾಲೂಕನ್ನು ಸೇರ್ಪಡಿಸಿಕೊಳ್ಳಲಾಯಿತು.

ಈ ತಾಲೂಕು ಮುಂದೆ ಭಾರತದ ಸ್ವಾತಂತ್ರ್ಯ ಸಂಗಾಮದಲ್ಲಿ ತನ್ನದೇ ಆದ ವಿಶೇಷ ಛಾಪನ್ನು ಮೂಡಿಸಿದೆ. ಇಲ್ಲಿಯ ಸ್ವಾತಂತ್ರ್ಯ ಚಳುವಳಿಯ ವೀರರನ್ನು ಕಂಡ ರಾಷ್ಟ್ರದ ಶ್ರೇಷ್ಠ ನೇತಾರರಾದ ಲೋಕಮಾನ್ಯ ಬಾಲಗಂಗಾಧರ ತಿಲಕರು ಸ್ವತಃ ಚಿಕ್ಕೋಡಿಗೆ ಭೆಟ್ಟಿ ನೀಡಿ ಇಲ್ಲಿನ ಶ್ರೀ ವೆಂಕಟೇಶ್ವರ ದೇವಾಲಯದಲ್ಲಿ ಸ್ವಾತಂತ್ರ್ಯ ವೀರರನ್ನು ಉದ್ದೇಶಿಸಿ ಭಾಷಣ ಮಾಡಿದರು. ಬ್ರಿಟೀಷರ ವಿರುದ್ಧ ಹೋರಾಡುವ ಸ್ವಾತಂತ್ರ್ಯ ಕಲಿಗಳ ದಂಡೇ ಚಿಕ್ಕೋಡಿಯಲ್ಲಿತ್ತು. ನಾಗಪೂರ ಸತ್ಯಾಗ್ರಹದಲ್ಲಿ ಇಲ್ಲಿನ ಸ್ವಾತಂತ್ರ್ಯ ಯೋಧರು ಪಾಲ್ಗೊಂಡು ಹುತಾತ್ಮರಾದರು. ನಿಪ್ಪಾಣಿಯಲ್ಲಿ ಸ್ವಾತಂತ್ರ್ಯ ಚಳುವಳಿ ಉಲ್ಬಣಿಸಿದಾಗ ಸುಮಾರು ೩೬ ಜನರು ಬಂಧನಕ್ಕೆ ಒಳಗಾದರು. ಹೀಗೆ ಬ್ರಿಟೀಷರ ವಿರುದ್ಧ ಹೋರಾಟಕ್ಕೆ ನಿಂತ ವೀರ ಕಲಿಗಳು ಬ್ರಿಟೀಷರ ಟಪಾಲುಗಳನ್ನು ಕೊಳ್ಳೆ ಹೊಡೆಯುವದರೊಂದಿಗೆ ರಾಯಬಾಗ ರೇಲ್ವೆ ಸ್ಟೇಶನನ್ನು ಸುಟ್ಟುಹಾಕಿದರು. ಹೀಗೆ ಚಿಕ್ಕೋಡಿ ತಾಲೂಕು ಸ್ವಾತಂತ್ರ್ಯ ಸಂಗ್ರಾಮದಲ್ಲಿ ರಾಜ್ಯದಲ್ಲಿಯೇ ಮುಂಚೂಣಿಯಲ್ಲಿದ್ದ ತಾಲೂಕು ಎಂದೆನಿಸಿದೆ.

ಭಾರತದ ಸ್ವಾತಂತ್ರ್ಯದ ನಂತರ ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ಈ ತಾಲೂಕಿನ ಹಲವಾರು ಗ್ರಾಮಗಳ ಮುಖಂಡರ ಶ್ರಮ ಅಷ್ಟಿಷ್ಟಲ್ಲ. ಚಿಕ್ಕೋಡಿ ನಗರ ಸಭೆಯಲ್ಲಿ ಕನ್ನಡ ಬೆಳವಣಿಗೆಗೆ ಹಾಗೂ ಬಳಕೆಗೆ ಠರಾವು ಅಂಗೀಕಾರ ಮಾಡುವುದರಲ್ಲಿ ದುಡಿದ ಶ್ರೀಮತಿ ಚಂಪಕ್ಕಾ ಹುಂಬರವಾಡಿ ಮತ್ತು ಶ್ರೀಮತಿ ಯಮುನಾದೇವಿ ಪಾಟೀಲರ ಕಾರ್ಯ ಶ್ಲಾಘನೀಯ.

ರಾಜಕೀಯವಾಗಿ ಚಿಕ್ಕೋಡಿ ತಾಲೂಕನ್ನು ಅವಲೋಕಿಸಿದಾಗ ಈ ತಾಲೂಕು ಪ್ರಾಚೀನ ಕಾಲಾವಧಿಯ ಆದಿ ಮಾನವನ ನೆಲೆಯಿಂದ ಹಿಡಿದು ಆಧುನಿಕ ಮಾನವನ ವರೆಗಿನ ಚರಿತ್ರೆಯನ್ನು ಒಳಗೊಂಡಿದೆ. ಪ್ರಾಚೀನ ಕದಂಬರ ಕಾಲಾವಧಿಯಿಂದ

ಪೇಶ್ವೆಯೆರ ಆಡಳಿತದ ಕಾಲಾವಧಿಯ ವರೆಗೆ ತಾಲೂಕನ್ನು ಹಲವಾರು ರಾಜ್ಯ ಮನೆತನಗಳು ಆಳಿವೆ. ಈ ರಾಜ್ಯ ಮನೆತನಗಳು ಕೇವಲ ಆಡಳಿತವನ್ನಷ್ಟೆ ಮಾಡಲಾರದೆ ತಮ್ಮದೇ ಆದ ಸಾಂಸ್ಕೃತಿಕ ವೈಶಿಷ್ಠತೆಗಳನ್ನು ಈ ಕನ್ನಡದ ಚಿಕ್ಕೋಡಿ ತಾಲೂಕಿನ ಜನತೆಗೆ ಕೊಡುಗೆಯಾಗಿ ನೀಡಿವೆ. ಅಂತಹ ಮಹಾನ್ ರಾಜರುಗಳ ಆಡಳಿತದ ಕಾಲಾವಧಿಯ ಹಲವಾರು ಅವಶೇಷಗಳು ತಾಲೂಕಿನ ವಿವಿಧೆಡೆಯಲ್ಲಿ ನಮಗೆ ಗೋಚರವಾಗುತ್ತವೆ. ಈ ತಾಲೂಕು ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿ ಸಾಂಪ್ರದಾಯಿಕ ರಾಜಕೀಯ ವ್ಯವಸ್ಥೆಯಲ್ಲಿ ನಾವು ಹಲವಾರು ಬದಲಾವಣೆಗಳನ್ನು ಕಾಣಬಹುದು. ಯುರೋಪಿಯನ್ನರ ಆಗಮನದಿಂದ ಭಾರತದ ಸಾಂಪ್ರದಾಯಿಕ ರಾಜಕೀಯದ ಮೇಲೆ ಯುರೋಪಿನ ಮುಂದುವರೆದ ರಾಜಕೀಯ ವ್ಯವಸ್ಥೆಯ ಪರಿಣಾಮದಿಂದ ಜಗತ್ತಿನೊಂದಿಗೆ ಈ ತಾಲೂಕು ಬೆರೆಯಿತಲ್ಲದೆ ತಾಲೂಕಿನಾದ್ಯಂತ ವಾಣಜ್ಯಿಕ ಬೆಳೆಗಳ ಬೆಳೆವಣಿಗೆ ಹಾಗೂ ಕೈಗಾರಿಕೆಗಳ ಸ್ಥಾಪನೆಗೆ ನಾಂದಿಯಾಯಿತು. ನಂತರ ರಾಜಕೀಯ ಸಂಘ ಸಂಸ್ಥೆಗಳ ಉಗಮದಿಂದ ತಾಲೂಕಿನ ಸಹಕಾರಿ ರಂಗ ಅಭಿವೃದ್ದಿಯಾಯಿತು. ಅದರಲ್ಲಿ ಮಲ್ಲಯ್ಯಾ ಕವಟಗಿಮಠ ಮತ್ತು ಶಾಂತಪ್ಪಣ್ಣಾ ಮಿರ್ಜಿ ಯವರಂತಹ ಧೀಮಂತ ವ್ಯಕ್ತಿಗಳು ಮಿಂಚಿದ್ದಾರೆ. ರಾಜಕೀಯ ಕ್ಷೇತ್ರದಲ್ಲಿ ಜಾಗತಿಕ ಮಟ್ಟದ ಗಮನವನ್ನು ಈ ಕ್ಷೇತ್ರ ಸೆಳೆದಿದೆ. ಒಬ್ಬ ವ್ಯಕ್ತಿಯನ್ನು ಸತತವಾಗಿ ೭ ಬಾರಿ ಸಂಸತ್ತಿಗೆ ಆರಿಸಿದ ಕ್ಷೇತ್ರ ಇದು. ಈ ಕ್ಷೇತ್ರ ೩ ವಿಧಾನ ಸಭಾ ಕ್ಷೇತ್ರಗಳನ್ನೊಳಗೊಂಡ ಕ್ಷೇತ್ರವಾಗಿದೆ. ಈ ಕ್ಷೇತ್ರದಿಂದ ಆಯ್ಕೆಯಾದ ಹಲವಾರು ಧೀಮಂತ ನಾಯಕರು ರಾಜ್ಯದ ವಿಧಾನ ಸಭೆಯಲ್ಲಿ ಉನ್ನತ ಹುದ್ದೆಗಳನ್ನು ಪಡೆದಿದ್ದಾರೆ.

ಧಾರ್ಮಿಕವಾಗಿ ಈ ತಾಲೂಕೂ ಜೈನ ಧರ್ಮದ ತವರು ಎನಿಸಿದೆ. ಹಲವಾರು ದೇವಾನು ದೇವತೆಗಳನ್ನು ಹೊಂದಿದ ತಾಲೂಕು ಇದಾಗಿದೆ. ಹಲವಾರು ಸಂತರು, ದಾರ್ಶನಿಕರು, ಮೌಲ್ವಿ ಇಗಳು ಈ ತಾಲೂಕಿನಲ್ಲಿ ಆಗಿ ಹೋಗಿದ್ದಾರೆ. ಈ ತಾಲೂಕು ಹಿಂದೂ – ಮುಸ್ಲಿಂ ಸಾಮರಸ್ಯದ ಬೀಡಾಗಿದೆ. ಇಲ್ಲಿಯ ದರ್ಗಾಗಳಿಗೆ ಹಲವಾರು ಹಿಂದೂಗಳು, ಹಿಂದೂ ದೇವತೆಗಳಿಗೆ ಮುಸಲ್ಮಾನ ಜನರು ನಡೆದುಕೊಳ್ಳುತ್ತಾರೆ.

ಆರ್ಥಿಕವಾಗಿ ಈ ತಾಲೂಕು ನಿರಂತರ ಜನನಿಬಿಡದಿಂದ ಕೂಡಿದ್ದು ನಿರಂತರವಾದ ವ್ಯವಹಾರಿಕ ಕೇಂದ್ರವೆಂದೆನಿಸಿದೆ. ಚಿಕ್ಕೋಡಿ ತಾಲೂಕಿನ ನಿಪ್ಪಾಣಿ ಮತ್ತು ಸದಲಗಾ, ನಾಗರಮುನ್ನೋಳ್ಳಿ ಮುಂತಾದ ಊರುಗಳು ವ್ಯಾಪಾರಿ ಕೇಂದ್ರಗಳೆನಿಸಿವೆ. ಚಿಕ್ಕೋಡಿ ತಾಲೂಕಿನಲ್ಲಿ ರಾಷ್ಟ್ರೀಯ ಹೆದ್ದಾರಿ ಹಾದು ಹೋಗುವುದರಿಂದ ಬ್ರಿಟೀಷ ಆಡಳಿತದ ಕಾಲಾವಧಿಯಲ್ಲಿ ವ್ಯಾಪಾರ ವಾಣಿಜ್ಯಿಕ ಚಟುವಟಿಕೆಗಳು ಇಲ್ಲಿ ಚುರುಕಿನಿಂದ ಕೂಡಿದ್ದವು.

ಚಿಕ್ಕೋಡಿ ತಾಲೂಕು ಅತಿ ಹೆಚ್ಚು ಕೃಷಿಯೋಗ್ಯ ಜಮೀನನ್ನು ಹೊಂದಿದೆ.

ಸುಮಾರು ೨೦,೦೦೦ ಹೆಕ್ಟೇರ ಭೂಮಿಯಲ್ಲಿ ಕೃಷಿ ಚಟುವಟಿಕೆಗಳನ್ನುಈ ತಾಲೂಕಿನ ಜನತೆ ಕೈಕೊಳ್ಳುತ್ತಾರೆ. ತಂಬಾಕಿನ ಉತ್ಪಾದನೆಗೆ ತಾಲೂಕು ಪ್ರಸಿದ್ಧಿಯಾಗಿದ್ದು ನಿಪ್ಪಾಣಿ ನಗರವು ತಂಬಾಕು ವ್ಯಾಪಾರದ ಪ್ರಮುಖ ಕೇಂದ್ರವಾಗಿದೆ. ಇವುಗಳೊಂದಿಗೆ ಕಬ್ಬು, ಅಡಿಕೆಯೊಂದಿಗೆ ತಿನ್ನುವ ಎಲೆ, ಭತ್ತ ಮೆಕ್ಕೆಜೋಳ, ಹುರಳಿ, ಗೋಧಿ, ತೊಗರಿ, ಮೆನಸಿನಕಾಯಿ, ಹೆಸರು, ಅವರೆ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಈ ತಾಲೂಕು ಒಟ್ಟಾರೆಯಾಗಿ ಸುಮಾರು ೭೦% ರೈತಾಪಿವರ್ಗವನ್ನು ಹೊಂದಿದೆ. ಈ ಪ್ರದೇಶದಲ್ಲಿ ವ್ಯವಸಾಯದ ತ್ವರಿತ ಗತಿಯ ಬೆಳವಣಿಗೆಯನ್ನು ಗಮನಿಸಿದಾಗ ಈ ತಾಲೂಕಿನ ಆರ್ಥಿಕ ಪ್ರಗತಿಯ ಸಂಕೇತವೆಂದೇ ಹೇಳಬಹುದು.

ಚಿಕ್ಕೋಡಿ ತಾಲೂಕು ಕೃಷಿಯೊಂದಿಗೆ ಪಶುಸಂಗೋಪನೆಯನ್ನು ಅಳವಡಿಸಿಕೊಂಡಿದೆ. ಆಡು, ಕುರಿ ಕೋಳಿ, ಪಶು, ಮೊಲ ಮುಂತಾದ ಪ್ರಾಣಿಗಳನ್ನು ಸಾಕಿಕೊಂಡಿದ್ದಾರೆ. ಪಶುಸಂಗೋಪನೆಯೊಂದಿಗೆ ಕೋಳಿ ಸಾಕಾಣಿಕೆಯು ಈ ತಾಲೂಕಿನ ಜನತೆಯ ಉಪ ಕಸಬು ಆಗಿದೆ.

ಈ ತಾಲೂಕಿನಲ್ಲಿ ಗುಡಿ ಕೈಗಾರಿಕೆಗಳೊಂದಿಗೆ ದೊಡ್ಡ ಕೈಗಾರಿಕೆಗಳು ಅಭಿವೃದ್ಧಿಯಾಗುತ್ತಿದ್ದು ಈ ತಾಲೂಕು ೩ ಸಕ್ಕರೆ ಕಾರ್ಖಾನೆಗಳನ್ನು ಹೊಂದಿದ ಬೆಳಗಾವಿ ಜಿಲ್ಲೆಯ ಏಕೈಕ ತಾಲೂಕು ಆಗಿದೆ.

ಕೈಗಾರಿಕೆಗಳೊಂದಿಗೆ ಚಿಕ್ಕೋಡಿ ತಾಲೂಕು ಶೈಕ್ಷಣಿಕ ಕ್ಷೇತ್ರದಲ್ಲಿ ಗಣನೀಯವಾದ ಸಾಧನೆಯನ್ನು ಸಾಧಿಸಿದ ತಾಲೂಕು ಆಗಿದ್ದು, ಈ ತಾಲೂಕಿನಲ್ಲಿ ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳು ಪ್ರಚಲಿತ ಭಾಷೆಗಳಾಗಿವೆ. ಪೇಶ್ವೆಗಳ ಆಡಳಿತದ ಕಾಲಾವಧಿಯಲ್ಲಿ ಇಲ್ಲಿನ ಆಡಳಿತ ಭಾಷೆ ಮರಾಠಿಯಾಗಿದ್ದರಿಂದ ಈ ತಾಲೂಕಿನಲ್ಲಿ ಇಂದಿಗೂ ಸಹ ಮರಾಠಿ ಭಾಷಿಕರನ್ನು ನಾವು ಕಾಣಬಹುದಾಗಿದೆ. ಈ ರೀತಿಯಾಗಿ ನಾವು ಕನ್ನಡ ಮತ್ತು ಮರಾಠಿ ಬಾಂಧವ್ಯದ ಸಾಮರಸ್ಯತೆಯನ್ನು ಈ ತಾಲೂಕಿನಲ್ಲಿ ಕಾಣಬಹುದಾಗಿದೆ. ಇಂದು ಚಿಕ್ಕೋಡಿ ತಾಲೂಕು ಶೈಕ್ಷಣಿಕ ರಂಗದಲ್ಲಿ ಪ್ರಗತಿ ಸಾಧಿಸುವದರೊಂದಿಗೆ ಶೈಕ್ಷಣಿಕ ಜಿಲ್ಲೆಯಾಗಿ, ಪ್ರೌಢಶಾಲಾ ೧೦ನೆಯ ತರಗತಿಯಲ್ಲಿ ೩ ಬಾರಿ ರಾಜ್ಯಕ್ಕೆ ಪ್ರಥಮ ಸ್ಥಾನ ಪಡೆದ ಶೈಕ್ಷಣಿಕ ಜಿಲ್ಲೆಯಾಗಿದೆಯಲ್ಲದೆ ಬೆಳಗಾವಿ ಜಿಲ್ಲೆಯಲ್ಲಿ ಹೆಚ್ಚು ಸಾಕ್ಷರರನ್ನು ಹೊಂದಿದ ತಾಲೂಕು ಇದಾಗಿದೆ.

ಚಿಕ್ಕೋಡಿ ತಾಲೂಕು ಸಾರಿಗೆ – ಸಂಪರ್ಕ ವ್ಯವಸ್ಥೆಯನ್ನು ಕರ್ನಾಟಕ – ಮಹಾರಾಷ್ಟ್ರ , ಗೋವಾ ಹಾಗೂ ಇನ್ನುಳಿದ ಪ್ರದೇಶಗಳಿಂದ ಸಂಪರ್ಕದ ಕೊಂಡಿಯಂತೆ ಇದೆ. ಚಿಕ್ಕೋಡಿ ತಾಲೂಕು ಆರೋಗ್ಯದ ದೃಷ್ಟಿಯಿಂದ ಮುಂದುವರೆದ ತಾಲೂಕು ಆಗಿದ್ದು ಈ ತಾಲೂಕು ಬೆಳಗಾವಿ ನಂತರದ ದೊಡ್ಡ ಸರಕಾರಿ ಆಸ್ಪತ್ರೆಯನ್ನು ಹೊಂದಿದೆ. ನಗರದ ಮತ್ತು ನಗರದ ಸುತ್ತಲು ಇರುವ ದೊಡ್ಡ ದೊಡ್ಡ ಊರುಗಳಲ್ಲಿ ಪ್ರಾಥಮಿಕ

ಆರೋಗ್ಯ ಕೇಂದ್ರಗಳು ತಮ್ಮ ಸೇವೆಯನ್ನು ಸಲ್ಲಿಸುತ್ತಿವೆ. ತಾಲೂಕಿನ ನಿಪ್ಪಾಣಿ ಹಾಗೂ ಸದಲಗಾ ನಗರಗಳು ಮೇಲ್ದರ್ಜೆಯ ಆಸ್ಪತ್ರೆಗಳನ್ನು ಹೊಂದಿವೆ.

ಚಿಕ್ಕೋಡಿಯ ಅಭಿವೃದ್ಧಿಯಲ್ಲಿ ಸಹಕಾರಿ ಸಂಘಗಳು ತಮ್ಮದೇ ಆದ ಮಹತ್ವದ ಪಾತ್ರ ವಹಿಸುತ್ತಿದ್ದು ಇಂದಿನ ಅಂಕಿ ಅಂಶಗಳ ಪ್ರಕಾರ ೬೭೧ ಸಹಕಾರಿ ಸಂಘಗಳು ಕಾರ್ಯನಿರತವಾಗಿವೆ. ಈ ರೀತಿಯಾಗಿ ಸಹಕಾರಿ ಸಂಘಗಳು ಚಿಕ್ಕೋಡಿ ತಾಲೂಕಿನ ಆರ್ಥಿಕ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸಿವೆ.

ಆಡಳಿತದ ಅನುಕೂಲದ ದೃಷ್ಠಿಯಿಂದ ಚಿಕ್ಕೋಡಿ ತಾಲೂಕನ್ನು ನಾಲ್ಕು ಕಂದಾಯ ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಚಿಕ್ಕೋಡಿ, ನಿಪ್ಪಾಣಿ, ಸದಲಗಾ ಮತ್ತು ನಾಗರಮುನ್ನೊಳ್ಳಿ. ಈ ಕಂದಾಯವಿಭಾಗಗಳ ಕಂದಾಯ ಸಂಗ್ರಹಣೆಗೆ ಕಂದಾಯ ಅಧಿಕಾರಿಗಳನ್ನು ನೇಮಿಸಲಾಗಿದೆ. ಇದರೊಂದಿಗೆ ಚಿಕ್ಕೋಡಿ ತಾಲೂಕವು ೭೧ ಗ್ರಾಮ ಪಂಚಾಯಿತಿ, ೭ ನಗರ ಪಂಚಾಯತಿ ಮತ್ತು ೩ ಪುರ ಸಭೆಗಳನ್ನು ಹೊಂದಿದೆ. ತಾಲೂಕಿನ ಕೇಂದ್ರ ಸ್ಥಳವಾದ ಚಿಕ್ಕೋಡಿಯಲ್ಲಿ ತಾಲೂಕಾ ಮಟ್ಟದ ಎಲ್ಲ ಆಡಳಿತ ಕಚೇರಿಗಳನ್ನು ಹೊಂದಿದ ತಾಲೂಕು ಆಗಿದೆಯಲ್ಲದೆ ಸಧ್ಯದರಲ್ಲಿ ಜಿಲ್ಲೆಯಾಗುವ ಸೌಭಾಗ್ಯಕ್ಕಾಗಿ ಕಾಯುತ್ತಿದೆ. ಜಿಲ್ಲೆಗೆ ಬೇಕಾದ ಎಲ್ಲ ಸೌಲಭ್ಯಗಳನ್ನು ಈ ತಾಲೂಕು ಹೊಂದಿದೆ. ಪ್ರಸ್ತುತ ಈ ತಾಲಲ್ಲು ತನ್ನದೇ ಆದ ಆದ ನ್ಯಾಯಾಂಗ ವ್ಯವಸ್ಥೆಯನ್ನು ಹೊಂದಿದ್ದು ಬೆಳಗಾವಿ ಜಿಲ್ಲೆಯಲ್ಲಿಯೇ ಪ್ರಪ್ರಥಮ ನ್ಯಾಯಾಲಯ ಹೊಂದಿದ ಕೀರ್ತಿ ಈ ತಾಲೂಕಿನದ್ದಾಗಿದೆ. ಕ್ರಿ. ಶ. ೧೮೭೯ ರಲ್ಲಿ ಚಿಕ್ಕೋಡಿಯಲ್ಲಿ ನ್ಯಾಯಾಲಯವನ್ನು ಸ್ಥಾಪಿಸಲಾಯಿತು. ಇಲ್ಲಿ ಇರುವ ನ್ಯಾಯಾಲಯಗಳು ಸಹ ಕಾರ್ಯ ನಿರತವಾಗಿವೆ. ಎರಡು ಸಿವಿಲ್, ಎರಡು ಮುನಸಿಪ್ ಮತ್ತು ಜುಡಿಶಿಯಲ್ ನ್ಯಾಯಾಲಯಗಳಿವೆ. ಹೆಸರಾಂತ ಕನ್ನಡದ ಹಾಗೂ ಮರಾಠೀ ನ್ಯಾಯಾಧೀಶರು ಕಾರ್ಯ ನಿರ್ವಹಿಸಿದ್ದಾರೆ. ಇದು ಹಿಂದಿನ ಮುಂಬೈ ಪ್ರಾಂತದ ಗ್ರಾಮೀಣ ಪ್ರದೇಶದ ದೊಡ್ಡ ನ್ಯಾಯಾಲಯವಾಗಿದೆ.

ಶಾಂತಿ ಸುವ್ಯವಸ್ಥೆಯನ್ನು ರಾಜ್ಯದ ಸುಭದ್ರತೆಗಾಗಿ ಬಹು ಹಿಂದಿನ ಕಾಲದಿಂದಲೂ ಕಾನೂನು ವ್ಯವಸ್ಥೆಯನ್ನು ಜಾರಿಗೊಳಿಸಲಾಗಿದೆ ಚಿಕ್ಕೋಡಿ ತಾಲೂಕವು ನಾಲ್ಕು ಆರಕ್ಷಕ ಠಾಣೆಗಳನ್ನು ಹೊಂದಿದ್ದು; ಚಿಕ್ಕೋಡಿಯು ಡೆಪ್ಯೂಟಿ ಕಮೀಷನರ ಹಾಗೂ ಡಿ. ವಾಯ್. ಎಸ್. ಪಿ. ಆರಕ್ಷಕ ಠಾಣೆಗಳನ್ನು ಹೊಂದಿದೆ.

ಕಲೆ ಹಾಗೂ ಸಾಹಿತ್ಯಕವಾಗಿ ಚಿಕ್ಕೋಡಿ ತಾಲೂಕನ್ನು ವೀಕ್ಷಿಸಿದಾದ ಸಂಗೀತ, ಸಾಹಿತ್ಯ, ನಾಟಕದಂತಹ ಕಲೆಗಳಿಗೆ ಪ್ರಸಿದ್ಧಿ ಹೊಂದಿದ್ದು ಕರ್ನಾಟಕದಲ್ಲೇ ವಿಸ್ಮಯವಾದ ಜಾನಪದ ಕಲೆಗೆ ಸಾಕಷ್ಟು ಕೊಡುಗೆ ನೀಡಿದ ಹೆಮ್ಮೆ ಈ ತಾಲೂಕಿಗೆ ಇದೆ. ಈ ತಾಲೂಕಿನಲ್ಲಿ ಸಂಗೀತಗಾರರಿಗೂ ಕೊರತೆ ಇಲ್ಲ. ಅದನ್ನು ಆಲಿಸುವ ಜನತೆಗೂ ಕೊರತೆ ಇಲ್ಲ. ಚಿಕ್ಕೋಡಿ ಹಾಗೂ ನಿಪ್ಪಾಣಿಗಳಲ್ಲಿ ಸಂಗೀತ ಮಂಡಲಗಳಿದ್ದು ಇವು

ಭಾರತದ ಎಲ್ಲ ಶ್ರೇಷ್ಠ ಕಲಾವಿದರನ್ನು ಬರಮಾಡಿಕೊಳ್ಳುತ್ತಿವೆ. ಈ ತಾಲೂಕು ಆಗಿದ್ದು ಇಲ್ಲಿ ಕನ್ನಡ ಮರಾಠಿ ಭಾಷೆಗಳೆಂಬ ಬೇಧವಿಲ್ಲದೆ ದ್ವಿಭಾಷೆಗಳಲ್ಲೂ ಸಾಹಿತ್ಯ ತನ್ನ ಮೆರಗನ್ನು ಪಡೆದಿದೆ. ಈ ನಿಟ್ಟಿನಲ್ಲಿ ನೋಡಿದಾಗ ಇಲ್ಲಿ ಉತ್ತಮ ಅನುವಾದಕ ಸಾಹಿತಿಗಳನ್ನು ಈ ತಾಲೂಕಿನಲ್ಲಿ ನೋಡಬಹುದು. ದಿನದಿಂದ ದಿನಕ್ಕೆ ಈ ತಾಲೂಕಿನಲ್ಲಿ ಸಾಕಷ್ಟು ಕವಿಗಳು, ಲೇಖಕರು, ಕಲಾವಿದರೂ ಬೆಳೆಯುತ್ತಿರುವುದನ್ನು ಕಾಣಬಹುದು. ಈ ತಾಲೂಕಿನ ಯಡೂರ ಗ್ರಾಮದವರಾದ ಶಿವರಾಮ ಬುವಾ ಯಡೂರಕರ ಹಾಗೂ ಸದಲಗಾ ಗ್ರಾಮದ ಕೃಷ್ಣಾ, ಪಾಪಾಲಾಲ ಉಸ್ತಾದ ರಂತವರು ತಬಲಾ ನುಡಿಸುವಲ್ಲಿ ಎತ್ತಿದ ಕೈಗಳಾಗಿದ್ದಾರೆ. ಹಿಂದೂಸ್ಥಾನಿ ಗಾಯಕ ಮತ್ತು ರಂಗ ಕಲಾವಿದೆಯಾಗಿ ನಾಡಿನಲ್ಲಿ ಖ್ಯಾತಿ ಗಳಿಸಿದ ದಿ.ಸೋನೂಬಾಯಿ ದೊಡಮನಿ ಇವರು ಚಿಕ್ಕೋಡಿ ತಾಲೂಕಿನ ಆಸ್ತಿಯಾಗಿರುತ್ತಾರೆ. ಚಿಕ್ಕೋಡಿಯ ಶಿವಲಿಂಗ ಸ್ವಾಮಿಗಳು ನಾಟಕಗಳನ್ನು ರಚಿಸಿ ಒಬ್ಬ ಶ್ರೇಷ್ಠ ಪ್ರತಿಭಾವಂತ ನಾಟಕಕಾರ, ನಟ, ನಿರ್ದೇಶಕರೆಂಬ ಕೀರ್ತಿಗೆ ಪಾತ್ರರಾಗಿದ್ದಾರೆ.

ಸಾಹಿತ್ಯ ರಂಗದಲ್ಲಿ ಈ ತಾಲೂಕು ಮೂಂಚೂಣಿಯಲ್ಲಿದ್ದು ಹೊಲ್ಲಗೌವುಡನೆಂಬ ಶ್ರೇಷ್ಠ ಸಾಹಿತಿಯಿಂದ ಹಿಡಿದು ಇಂದಿನ ತರುಣ ಸಾಹಿತ್ಯ ಬಳಗದ ವರೆಗೆ ಸಾಹಿತ್ಯ ಬೆಳೆದು ಬಂದು ನಿರಂತರವಾಗಿ ಚಿಕ್ಕೋಡಿ ತಾಲೂಕಿನ ಸಾಹಿತ್ಯದ ಝುರಿ ತನ್ನ ಕಂಪನ್ನು ಸೂಸುತ್ತಿದೆ.

ಈ ರೀತಿಯಾಗಿ ಚಿಕ್ಕೋಡಿ ತಾಲೂಕು ಬೆಳಗಾವಿ ಜಿಲ್ಲೆಯ ಮಹಾರಾಷ್ಟ್ರದ ಗಡಿ ಹೊಂದಿರುವ ತಾಲೂಕು ಆಗಿದ್ದರೂ ಸಹ ಕರ್ಣಾಟಕದ ನಕ್ಷೆಯಲ್ಲಿ ತನ್ನನ್ನು ತಾನು ಗುರುತಿಸಿ ಕೊಂಡಿದೆ. ಬೆಳಗಾವಿ ಜಿಲ್ಲೆ ಅಲ್ಲದೆ ಕರ್ಣಾಟಕಕ್ಕೆ ಈ ತಾಲೂಕು ತನ್ನದೇ ಆದ ಐತಿಹಾಸಿಕ ಮಹತ್ವತೆಯನ್ನು ನೀಡುವುದರೊಂದಿಗೆ ಧಾರ್ಮಿಕ ಸಾಮರಸ್ಯ, ಆರ್ಥಿಕ ಸಬಲಿಕರಣ ಅಲ್ಲದೆ ರಾಜಕೀಯ ಮೆರಗನ್ನು ಕೊಡುವುದರೊಂದಿಗೆ ದೇಶದ ರಾಜಕೀಯದಲ್ಲಿ ವೈವಿಧ್ಯಮಯವಾದ ತಾಲೂಕು ಆಗಿದ್ದರೂ ಏಕತೆಯಲ್ಲಿ ಒಂದೇ ಆಗಿದೆ. ಇದರ ಜೊತೆಗೆ ಈ ತಾಲೂಕು ಕರ್ನಾಟಕದ ತುಂಬೆಲ್ಲಾ ಸಾಹಿತ್ಯದ ಕಂಪನ್ನು ಸೂಸಿದೆ. ಇಂತಹ ತಾಲೂಕಿನ ಸಮಗ್ರ ಅಧ್ಯಯನದ ವಿಷಯ ವಸ್ತುವನ್ನು ನಾನು ಅಧ್ಯಯನಕ್ಕೆ ಬಳಿಸಿಕೊಂಡಿದ್ದು ಅದರ ಚಿತ್ರಣವನ್ನು ಕೊಡಲು ನಾನು ಪ್ರಯತ್ನಿಸಿದ್ದೇನೆ.

# ಗ್ರಂಥ ಋಣ

| ಕೃತಿ | ಸಂಪಾದಕರು | ಪ್ರಕಟನೆ ವರ್ಷ | ಪುಟ |
|---|---|---|---|
| '೧' ಇತಿಹಾಸ ಸಂಶೋಧನಾ ಮಾರ್ಗ | ಡಾ. ಎಮ್. ವ್ಹಿ. ಪದ್ಮಾ<br>ಡಾ. ಎ. ವ್ಹಿ. ವೆಂಕಟರತ್ನ | ೧೯೮೫ | ೫ |
| '೨' ಬೆಳಗಾವಿ ಬೆಡಗು | ಡಾ. ಶಾಲನಿ ರಜನೀಶ | ೨೦೦೬ | ೪ |
| '೩' ಚಿಕ್ಕೋಡಿ ದರ್ಶನ | ಶ್ರೀ. ಮದನ್ ದೊಡಮನಿ | ೧೯೮೬ | ೨ |

# "ಚಿಕ್ಕೋಡಿ ತಾಲೂಕಿನ ರಾಜಕೀಯ ಚರಿತ್ರೆ"

*        ವಿಶಾಲ ಕರ್ನಾಟಕದ ಪ್ರಮುಖ ಜಿಲ್ಲೆ ಬೆಳಗಾವಿ. ಬೆಳಗಾವಿ ಜಿಲ್ಲೆಗೆ ತನ್ನದೇ ಆದ ಪ್ರಾಚೀನ ಇತಿಹಸವಿದೆ.ಬೆಳಗಾವಿ ಜಿಲ್ಲೆಯ ಒಂದು ಪ್ರಮುಖ ತಾಲೂಕು ಚಿಕ್ಕೋಡಿ. ಜಿಲ್ಲೆಯಲ್ಲಿಯೇ ಅತಿ ಹೆಚ್ಚಿನ ಸಾಕ್ಷರರನ್ನು ಹೊಂದಿರುವ ತಾಲೂಕು ಇದಾಗಿದೆ. ಚಿಕ್ಕೋಡಿಯು ತನ್ನ ಸುತ್ತಲೂ ಮೂರು ಕಡೆ ಸುತ್ತುವರೆದ ಸಹ್ಯಾದ್ರಿಯ ಕೊನೆಯಂಚಿನ ಬೆಟ್ಟದ ಇಳಿಜಾರು ಮಳೆಗಾಲದಲ್ಲಿ ಜುಳು ಜುಳು ಹರಿಯುವ ಚಿಕುತ್ರಾ ನದಿಯ ರಮ್ಯನೋಟ ಎಲೆ ತೋಟದ ಹಚ್ಚ ಹಸಿರು, ತಂಬಾಕು ಹೊಲಗಳಿಂದ ಕಂಗೊಳಿಸುವ ಪ್ರದೇಶ ಇದಾಗಿದೆ.

ಚಿಕ್ಕೋಡಿ ತಾಲೂಕು ಅಕ್ಷಾಂಶ ೧೬° - ೨೧° ದಿಂದ ೧೬° - ೩೦° ರ ವರೆಗೆ ಮತ್ತು ರೇಖಾಂಶ ೭೪° - ೨೨° ದಿಂದ ೭೪° - ೪೯° ರ ವರೆಗ ವಿಸ್ತರಿಸಿದೆ. ಈ ತಾಲೂಕಿನ ಉತ್ತರಕ್ಕೆ ಮತ್ತು ಪಶ್ಚಿಮಕ್ಕೆ ಮಹಾರಾಷ್ಟ್ರ ರಾಜ್ಯ, ಪೂರ್ವ ದಿಕ್ಕಿಗೆ ಅಥಣಿ, ರಾಯಬಾಗ ತಾಲೂಕುಗಳು ಹಾಗೂ ದಕ್ಷಿಣಕ್ಕೆ ಹುಕ್ಕೇರಿ ತಾಲೂಕುಗಳು ಇರುತ್ತವೆ. ಈ ತಾಲೂಕಿನ ಒಟ್ಟು ವಿಸ್ತೀರ್ಣ ೧೨೬೯.೫ ಚದುರ ಕಿ. ಮಿ. ಗಳು ಈ ತಾಲೂಕಿನಲ್ಲಿ ಒಟ್ಟು ೧೦೩ ಹಳ್ಳಿಗಳಿದ್ದು ಈ ತಾಲೂಕನ್ನು ೪ ಹೋಬಳಿಗಳನ್ನಾಗಿ ವಿಂಗಡಿಸಲಾಗಿದೆ. ಚಿಕ್ಕೋಡಿ, ಸದಲಗಾ, ನಿಪ್ಪಾಣಿ ಮತ್ತು ನಾಗರಮುನ್ನೋಳ್ಳಿ ಇವು ಈ ತಾಲೂಕಿನ ಹೋಬಳಿಗಳಾಗಿರುತ್ತವೆ.

ಚಿಕ್ಕೋಡಿ ತಾಲೂಕವು ೨೦೦೧ರ ಜನಗಣತಿಯ ಪ್ರಕಾರ ೫,೬೭,೬೦೧ ಜನಸಂಖ್ಯೆಯನ್ನು ಹೊಂದಿದೆ. ಈ ತಾಲೂಕಿನಲ್ಲಿ ಜೈನರು, ವೀರಶೈವರು, ಬ್ರಾಹ್ಮಣರು, ಮುಸಲ್ಮಾನರು, ಕುರುಬರು, ಅಂಬಿಗರು, ಮರಾಠಿಗರು, ಒಡ್ಡರು, ಗುಜ್ಜರು, ಮಾರವಾಡಿಗಳು, ಮತ್ತು ಕ್ರೈಸ್ತರು ಮೊದಲಾದ ಪಂಗಡದವರು ವಾಸವಾಗಿದ್ದಾರೆ, ಈ ತಾಲೂಕು ೬೩೨.೮ ಮಿ.ಮಿ.ವಾಡಿಕೆಯ ಸರಾಸರಿ ಮಳೆಯನ್ನು ಹೊಂದಿ ಆರ್ಥಿಕ ಸಮೃದ್ಧಿಯಿಂದ ಕೂಡಿದೆ.

ಚಿಕ್ಕೋಡಿ ತಾಲೂಕವು ಕೃಷಿ ಪ್ರಧಾನ ತಾಲೂಕು ಆಗಿದ್ದು ಈ ತಾಲೂಕಿನ ಉತ್ತರ ಭಾಗದಲ್ಲಿ ಕೃಷ್ಣಾ ನದಿಯು ಹರಿದರೆ, ತಾಲೂಕಿನ ಪಶ್ಚಿಮ ಭಾಗದಲ್ಲಿ ವೇದಗಂಗಾ ನದಿ ಹರಿದರೆ, ತಾಲೂಕಿನ ಪಶ್ಚಿಮದಿಂದ ಪೂರ್ವಕ್ಕೆ ದೂಧಗಂಗಾ ನದಿಗಳು ಹರಿದು ಮುಂದೆ ಕೃಷ್ಣಾ ನದಿಯನ್ನು ಸೇರುತ್ತವೆ.

ಬೆಳಗಾವಿ ಜಿಲ್ಲೆಯ ವಾಯವ್ಯ ಭಾಗದಲ್ಲಿರುವ ಚಿಕ್ಕೋಡಿ ತಾಲೂಕವು ತುಂಬ ಸಮೃದ್ಧವಾದುದು, ಪೂರ್ವ ಭಾಗ ಸಾಧಾರಣ ಮಟ್ಟದ್ದಾದರೂ ಪಶ್ಚಿಮ ಭಾಗ ತುಂಭಾ ಫಲವತ್ತಾಗಿದೆ. ವಾಣಿಜ್ಯಿಕ ಬೆಳೆಗಳಿಗೆ ಪ್ರಖ್ಯಾತವಾದ ಈ ತಾಲೂಕವು ಸಂಪತ್ತಿನ ಆಗರವಾಗಿರುವುದರಿಂದ ಈ ಪ್ರದೇಶವು ಹಲವಾರು ರಾಜ ಮಹಾರಾಜರುಗಳ ಆಡಳಿತಕ್ಕೆ ಒಳಪಟ್ಟಿತ್ತಲ್ಲದೆ ಪರಕೀಯರ ಕಣ್ಣನ್ನು ಸಹ ತನ್ನಡೆಗೆ ಸೆಳೆದ ತಾಲೂಕು ಚಿಕ್ಕೋಡಿಯಾಗಿದೆ.

ಚಿಕ್ಕೋಡಿ ತಾಲೂಕಿನ ಬಗ್ಗೆ ನಮಗೆ ಅಧ್ಯಯನ ಮಾಡಲು ಪುರಾತತ್ವ ಇಲಾಖೆ ತುಂಬಾ ಸಹಾಯಕಾರಿಯಾಗಿದೆ. ಇಲ್ಲಿಯ ಶಿಲಾ ಶಾಸನಗಳು, ರಾಜ ವಾಡೆಗಳು , ದೇವಾಲಯಗಳು ನಮಗೆ ಚಿಕ್ಕೋಡಿ ತಾಲೂಕಿನ ಚಾರಿತ್ರಿಕ ಇತಿಹಾಸವನ್ನು ತಿಳಿಯಲು ಸಹಾಯಕಾರಿಯಾಗಿವೆ.

ಚಿಕ್ಕೋಡಿ ತಾಲೂಕಿನ ಯಕ್ಸಂಬಾ ಹಾಗೂ ಕಡೋಲಿ ಗ್ರಾಮಗಳಲ್ಲಿ ಶಿಲಾತಾಮ್ರಯುಗದ ಸಂಸ್ಕೃತಿ ಮತ್ತು ಚಿಕ್ಕೋಡಿ ತಾಲೂಕಿನ ಕರೋಶಿಯಲ್ಲಿ ಆದಿಮಾನವರ ಕಾಲದ ಅವಶೇಷಗಳೂ ಲಭ್ಯವಾಗಿರುವುದರಿಂದ ಸಿಂಧೂ ನದಿಯ ಪ್ರವಾಹದಿಂದ ಹರಪ್ಪ ನಗರ ಹಾಳಾದ ತರುವಾಯ ಅಲ್ಲಿನ ಮತ್ತು ಗುಜರಾತದ ಲೊಥಾಲ್ ಕಡೆಯಿಂದ ಜನರು ಕೆಲಗಿಳಿಯುತ್ತಾ ಬಂದು ಕೃಷ್ಣಾ, ಘಟಪ್ರಭಾ, ಮಲಪ್ರಭಾ ನದಿಗಳ ಅಕ್ಕ ಪಕ್ಕದಲ್ಲಿ ತಮ್ಮ್ ನೆಲೆಗಳನ್ನು ಕಂಡುಕೊಳ್ಳಲು ಪ್ರಾರಂಭಿಸಿದರು. ಈ ಮಾಹಿತಿಯನ್ನು ಪುರಾತತ್ವ ಇಲಾಖೆಯವರು ಕೈಕೊಂಡ ಪ್ರಾಕ್ತನ ಉತ್ಖನನಗಳಿಂದ ತಿಳಿಯಬಹುದಾಗಿದೆ. ಬೆಳಗಾವಿ ಜಿಲ್ಲೆಯ ಚರಿತ್ರೆಯಲ್ಲಿ ಜಿಲ್ಲಾ ಕೇಂದ್ರವಾದ ಬೆಳಗಾವಿಯಲ್ಲಿ ಶಾತವಾಹನರ ಕಾಲದ ನಗರಾವಶೇಷಗಳು ಪತ್ತೆಯಾಗಿರುವುದು ಒಂದು ಪ್ರಮುಖ ಘಟನೆ. ಈ ಅವಶೇಷಗಳು ಇತಿಹಾಸ ಕಾಲಕ್ಕೆ ಸೇರಿದುದಾಗಿದ್ದರೆ ಕರೋಶಿ ಬಳಿ ದೊರೆತ ಅವಶೇಷಗಳು ಅದಕ್ಕಿಂತ ಪೂರ್ವದ ಇತಿಹಾಸವನ್ನು ಅಂದರೆ ೫, ೬ ನೇ ಶತಮಾನದ ಅವಶೇಷಗಳೆಂದೆನಿಸುತ್ತವೆ. ಇದರಂತೆ ಬೆಳಗಾವಿ ಸಮೀಪದ ಹಳೆ ಬೆಳಗಾವಿಯಲ್ಲಿ ಎಂದರೆ ಮೇಲೆ ತಿಳಿಸಿದ ಶಾತವಾಹನರ ನಗರಗಳ ಅವಶೇಷಗಳಲ್ಲಿ ದೊರೆತ ಪ್ರಾಕೃತ ಶಿಲಾ ಶಾಸನವು ಜಿಲ್ಲೆಯಲ್ಲಿ ದೊರೆತಿರುವ ಪ್ರಪ್ರಥಮವಾದ ಐತಿಹಾಸಿಕ ದಾಖಲೆಯೆಂದೆನಿಸಿದೆ. ಇದು ಕರ್ನಾಟಕದಲ್ಲಿ ದೊರೆತ ಐತಿಹಾಸಿಕ ದಾಖಲೆಗಳಲ್ಲಿ ಎರಡನೇ ದಾಖಲೆಯೆಂದು ಹೇಳಬಹುದು. ಈ ಶಿಲಾ ಶಾಸನದೊಂದಿಗೆ ಇನ್ನೂ ಹಲವಾರು ಶಿಲಾ ಶಾಸನಗಳು ನಮಗೆ ಲಭ್ಯವಾಗಿದ್ದು

ಆ ಶಿಲಾ ಶಾಸನಗಳ ಪೈಕಿ ಚಿಕ್ಕೋಡಿ ತಾಲೂಕಿನಲ್ಲಿ ಸುಮಾರು ೧೩ ಶಿಲಾ ಶಾಸನಗಳು ನಮಗೆ ಲಭ್ಯವಾಗಿವೆ. ಅವುಗಳೆಂದರೆ, ಅಕ್ಕೋಳ, ಜಾಗನೂರು, ಡೋಣವಾಡ, ಹಿರೇಹಳ್ಳ, ಕಬ್ಬೂರು, ಕೆರೂರು, ಯಡೂರು, ಖಡಕಲಾಟ, ನಾಯಿಂಗ್ಲಜ, ನಿಪ್ಪಾಣಿ, ಸಿದ್ದಾಪೂರವಾಡಿ, ಸ್ಥವನಿಧಿ, ಯಕ್ಸಂಬಾ, ಕೊಣ್ಣೂರು, ಮುಂತಾದ ಕಡೆಗಳಲ್ಲಿ ದೊರೆತ ಶಿಲಾ ಶಾಸನಗಳು ನಮಗೆ ತಮ್ಮದೇಯಾದ ಮಾಹಿತಿಯನ್ನು ನೀಡುತ್ತಿವೆ. ಅಕ್ಕೋಳದ ಶಿಲಾ ಶಾಸನವು ಸಂಸ್ಕೃತ ಭಾಷೆ, ನಾಗರ ಲಿಪಿಯನ್ನು ಹೊಂದಿದ್ದು ಇದು ಅಸ್ಪಷ್ಟ ಶಾಸನವಾಗಿದ್ದರೂ ಚಿಕ್ಕೋಡಿ ತಾಲೂಕಿನ ಐತಿಹಾಸಿಕ ದಾಖಲೆ ಎಂದೆನಿಸಿದೆ.

ಕಲ್ಯಾಣಿ ಚಾಲೂಕ್ಯರ ಅರಸ ಪ್ರತಾಪ ಕ್ರಿ. ಶ. ೧೧೬೮ ಡಿಶೆಂಬರ ೮ ರಂದು ಕೆತ್ತಿಸಿದ ಜಾಗನೂರು ಶಿಲಾಶಾಸನ ಕನ್ನಡ ಭಾಷೆಯನ್ನು ಹೊಂದಿದ್ದು ಈ ಶಿಲಾಶಾಸನ ಬಹನಾಳದ ಸ್ವಯಂಭೂ ಸಿದ್ದೇಶ್ವರನಿಗೆ ಭೂಮಿಯನ್ನು ದಾನ ಮಾಡಿದ ಬಗ್ಗೆ ಮಾಹಿತಿಯನ್ನು ನೀಡುವುದರೊಂದಿಗೆ ಸುಮಾರು ೧೨೨೦ ಹಳ್ಳಿಗಳ ಉಲ್ಲೇಖನವನ್ನು ಉಲ್ಲೇಖಿಸುವುದರೊಂದಿಗೆ ಈ ೧೨೦ ಹಳ್ಳಿಗಳು ಪ್ರಮುಖವಾಗಿ ' ವೈಜರಸಯ್ಯಾ' ಉತ್ತರಸಯ್ಯಾ, ಗುದ್ದಗಮಂಡಾ ಮುಂತಾದ ಜನರಿಗೆ ಸೇರಿದ್ದಾಗಿದ್ದು ಅರಸ ನೀಡಿದ ಈ ಕಾಣಿಕೆಯನ್ನು ಸಿದ್ಧೇಶ್ವರ ದೇವಾಲಯದ ಆಚಾರ್ಯ ಪಥರಾಶಿ ಪಂಡಿತ ದಾನವನ್ನು ಸ್ವೀಕರಿಸಿದ ಮಾಹಿತಿಯನ್ನು ನೀಡುತ್ತದೆ. ಈ ಮಾಹಿತಿಯ 'ಪ್ರಕಾರ ಮಹಾಮಂಡಲೇಶ್ವರ ತ್ರಿಭುವನಮಲ್ಲ ಬಿಜ್ಜಳದೇವ ಆಡಳಿತವನ್ನು ನಡೆಸುತ್ತಿದ್ದು ಮಹಾದಂಡನಾಯಕ ಮತ್ತು ಸೇನಾಧಿಪತಿಯಾದ ಧನ್ನುಗಿದೇವಯ್ಯ ಮತ್ತು ಮಹಾಮಂಡಲೇಶ್ವರ ಕಟ್ಟಮದೇವರಸ ಇಬ್ಬರು ಕುಹುಂಡಿ ಮುಸಾಶೀರ ಪ್ರದೇಶವನ್ನು ಆಳುತ್ತಿದ್ದರು, ಎಂಬ ಮಾಹಿತಿಯನ್ನು ನೀಡುತ್ತಿದೆ.

ಕಲ್ಯಾಣಿ ಚಾಲೂಕ್ಯರ ಜಾಗನೂರು ಹತ್ತಿರ ಹರೇಹಳ್ಳ ಶಿಲಾ ಶಾಸನ, ಹಿರೇಹಳ್ಳ ತೀರದ ಗವಿ ಸಿದ್ಧೇಶ್ವರ ದೇವಸ್ಥಾನದ ಹತ್ತಿರ ಇದೆ. ಈ ಶಿಲಾ ಶಾಸನವು ದೇವಗಿರಿಯ ಯಾದವ ದೊರೆ ಮಹಾದೇವನ ಆಡಳಿತದ ಕಾಲಾವಧಿಯದ್ದಾಗಿದ್ದು ಕುಹುಂಡಿ ಮುಸಾಶೀರನಾಡಿನ ಒಂದು ಪ್ರದೇಶವಾದ ಕಬ್ಬೂರು ಹಿರಿಯ ಅಗ್ರಹಾರವಾಗಿದ್ದು ಈ ಶಿಲಾಶಾಸನದ ಪ್ರಕಾರ ಕಲ್ಲರಸ ಈ ಭಾಗದ ಆಡಳಿತವನ್ನು ನಡೆಸುತ್ತಿದ್ದ ಎಂದು ತಿಳಿದು ಬಂದಿದೆ.

ಕ್ರಿ. ಶ. ೧೧೨೬ರ ಕಬ್ಬೂರದ ಕಲ್ಮೇಶ್ವರ ದೇವಸ್ಥಾನದ ಕಲ್ಲಿನ ಕಂಬದ ಶಿಲಾಶಾಸನವು ಸವದತ್ತಿಯ ರಟ್ಟರ ಕಾಲಾವಧಿಯದ್ದಾಗಿದ್ದು ಇದು ಕನ್ನಡ ಭಾಷೆಯದ್ದಾಗಿದೆ. ಈ ಶಿಲಾಶಾನದ ಪ್ರಕಾರ ಹಿರಿಯ ಅಗರಹಾರವಾದ ಕಬ್ಬೂರಿನ ಆರಾಧ್ಯ ದೇವರಾದ ಸ್ವಯಂಭೂದೇವ ಚಕ್ರವರ್ತಿ ಕಲದೇವ ಸ್ವಾಮಿಗೆ ಕಾಣಿಕೆಯನ್ನು ನೀಡಿದ ಬಗ್ಗೆ ವಿವರಣೆಯನ್ನು ನೀಡುತ್ತದೆ. ಈ ದೇವಸ್ಥಾನಕ್ಕೆ ನೀಡಿದ ಕಾಣಿಕೆ ರೂಪದ ಹಣವು

ಅಶ್ವಗಳ ಮಾರಾಟದಿಂದ ಸಂಗ್ರಹವಾದ ಕಂದಾಯ ತೆರಿಗೆಯಾಗಿದ್ದು ಈ ದಾನವನ್ನು ಹೆಳರೀದಾಸ- ಹೋಳಯ್ಯಾ , ಹೋಳಯ್ಯಾ ನಾಯಕ ಮತ್ತು ಇನ್ನೂ ಕೆಲವರ ಉಲ್ಲೇಖನವನ್ನು ಕಾಣಬಹುದಾಗಿದೆ.

ಚಿಕ್ಕೋಡಿ ತಾಲೂಕಿನ ಕೇರೂರ ಗ್ರಾಮದ ಮಾರುತಿ ದೇವಸ್ಥಾನದ ಮುಂಭಾಗದಲ್ಲಿ ಕೆತ್ತಿಸಲಾದ ಕಲ್ಲಿನ ಶಾಸನ ಕಲ್ಯಾಣಿ ಚಾಲುಕ್ಯ ವಂಶದ ಕಾಲದ್ದಾಗಿದ್ದು ಈ ಶಿಲಾಶಾಸನ ಕನ್ನಡ ಭಾಷೆಯನ್ನು ಹೊಂದಿದ್ದು ಇದರ ಕಾಲಮಾನ ಕ್ರಿ. ಶ. ಸುಮಾರು ೧೦೭೧ ಆಗಿರಬಹುದು. ಈ ಶಿಲಾಶಾಸನದ ಮೇಲ್ಭಾಗ ಹಾಳಾಗಿದ್ದು ಇದು ಭೂಮಿ ದಾನ, ಮನೆ ಜಾಗ ಮತ್ತು ಕಂದಾಯ ತೆರಿಗೆಯ ಬಗ್ಗೆ ವಿವರಣೆಯನ್ನು ನೀಡಿದ್ದು ಕೊರವಳ್ಳಿ – ೧೫೦ ಕೆರೆವೂರ ಅಗ್ರಹಾರದ ಮೂಲಸ್ಥಾನ ಕಪಿಲೇಶ್ವರ ದೇವರಿಗೆ ಸೇರಿದ್ದು ಮತ್ತು ಈ ದೇವಸ್ಥಾನದ ಮುಖ್ಯ ಆಚಾರ್ಯರೆಂದರೆ ವಾಮರಸ ಪಂಡಿತ ಎಂದು ಹೇಳಿದ್ದು ಈ ದೇವಾಲಯಕ್ಕೆ ಮಹಾಪ್ರಧಾನ ಸೇನಾಧಿಪತಿ ದಂಡನಾಯಕ ಜಯದೇವಯ್ಯಾ ಮಹಾಮಂಡಲೇಶ್ವರ ಜಯಸಿಂಹದೇವ ಕುಹುಂಡಿ ೩೦೦೦ ಮನ್ನೇಯನ್ನು ಆಳುತ್ತಿದ್ದ. ಮಹಾಮಂಡಳೇಶ್ವರತ ಕಟ್ಟಮದೇವ ಮತ್ತು ಮಹಾಮಂಡಲೀಕ ಹೇಮ್ಮಾಡಿದೇವರಸ ಕುಹುಂಡಿ ಮುಸಾಸೀರನಾಡಿನ ಭಾಗವಾದ ಕೊರವಳ್ಳಿ ವಿಭಾಗವನ್ನು ಆಳುತ್ತಿದ್ದರು ಎಂಬ ಮಾಹಿತಿಯನ್ನು ನೀಡುತ್ತದೆ.

ಚಿಕ್ಕೋಡಿ ತಾಲೂಕಿನ ಪವಿತ್ರ ಕ್ಷೇತ್ರವೆನಿಸಿದ ಯಡೂರ ವೀರಭದ್ರೇಶ್ವರ ದೇವಾಲಯದ ಮಂಟಪದ ಮಧ್ಯ ಭಾಗದಲ್ಲಿನ ಶಿಲಾಶಾಸನವು ಕ್ರಿ. ಶ. ೧೧೩೧ ಫೆಬ್ರುರಿ ೧೭ ರಂದು ರಚಿತವಾಗಿದ್ದು ಇದು ನಾಗರ ಲಿಪಿ, ಮರಾಠಿ ಭಾಷೆಯನ್ನು ಹೊಂದಿದೆ. ಈ ಶಾಸನ ಯಾದವ ದೊರೆ ೨ನೆ ಸಿಂಗನ ಕಾಲದ್ದಾಗಿದ್ದು ಇದರ ಪ್ರಕಾರ ವೀರಭದ್ರೇಶ್ವರ ದೇವಾಲಯದ ಸಭಾ ಮಂಟಪದ ಕಟ್ಟಡವನ್ನು ಅಣ್ಣಾಜೀ ನರಸಿಂಹ ದೇಶಪಾಂಡೆಯವರು ಕಟ್ಟಿಸಿದ್ದಾರೆ. ಇವರು ಪಾಶ್ಚಾಪೂರ ಪರಗಣದ ಅಂಕಲಗಿಯ ನಿವಾಸಿಯಾಗಿದ್ದರು.

ಕಲ್ಯಾಣಿ ಚಾಲೂಕ್ಯರ ೬ನೇ ವಿಕ್ರಮಾದಿತ್ಯನಿಂದ ಕ್ರಿ. ಶ. ೧೧೭೪ ರ ನವ್ಹಂಬರ ೧ ರಂದು ಕೊರೆಯಿಸಲಾದ ಖಡಕಲಾಟಕ ಜೈನ ಬಸದಿಯ ಮುಂದಿನ ಕಲ್ಲಿನ ಶಿಲಾಶಾಸನ ಈ ರೀತಿಯಾದ ಮಾಹಿತಿಯನ್ನು ನೀಡುತ್ತದೆ. ಖಡಕಲಾಟದ ರಾಜವಾಡೆಯ ಮತ್ತು ರಾಜ ಮನೆತನದ ಉಸ್ತುವಾರಿಯನ್ನು ನೋಡಿಕೊಳ್ಳುವುದು ಮತ್ತು ಹಂಚೇಶ್ವರ ದೇವಸ್ಥಾನದ ಹೆಸರಿನಲ್ಲಿ ೨೦ ಎಮ್ಮೆಗಳನ್ನು ಈ ದೇವಸ್ಥಾನದ ಸ್ವಾಮಿಗಳಿಗೆ ದಾನವನ್ನಾಗಿ ನೀಡಿದ ಮಾಹಿತಿಯನ್ನು ಹೇಳುತ್ತದೆ. ಈ ಶಿಲಾಶಾಸನ ಕಲ್ಯಾಣಿ ಚಾಲೂಕ್ಯರ ಕಾಲದ ಮಹಾಮಂಡಳೇಶ್ವರರಾದ ಸವದತ್ತಿಯ ರಟ್ಟರ ಕಾಲದ್ದು ಎಂದು ನಂಬಲಾಗಿದೆ.

ನಾಯಿಂಗ್ಲಜ ಗ್ರಾಮದ ಮಾರುತಿ ಮಂದಿರದಲ್ಲಿ ಕೆತ್ತಿಸಲಾದ ಈ ಶಿಲಾಶಾಸನವು ಮಹಾಮಂಡಳೇಶ್ವರ ರಟ್ಟರ ಕಾಲದ ಶಿಲಾ ಶಾಸನ ಎಂದು ಅಭಿಪ್ರಾಯ ಪಡಲಾಗಿದ್ದು ಈ ಶಿಲಾ ಶಾಸನ ಮರಾಠಿ ಭಾಷೆ ನಾಗರೀ ಲಿಪಿಯನ್ನು ಹೊಂದಿದೆ. ಊರಿನ ಪಟೇಲ ಮತ್ತು ಕುಲಕರ್ಣಿ ಮನೆತನದವರು ತಮ್ಮ ಆರಾಧ್ಯ ದೇವ ಹನುಮಾನನನ್ನೇ ಆರಾಧಿಸುತ್ತಿದ್ದರು, ಎಂದು ಮಾಹಿತಿಯನ್ನು ತಿಳಿಯಪಡಿಸುತ್ತದೆ. ಚಿಕ್ಕೋಡಿ ತಾಲೂಕಿನ ಸಿದ್ದಾಪೂರವಾಡಿಯಲ್ಲಿ ಶಿಲಾಶಾಸನವೊಂದು ದೊರೆತಿದ್ದು ಈ ಶಿಲಾಶಾಸನ ನಾಗರೀ ಲಿಪಿಯನ್ನು ಹೊಂದಿದ್ದು ಇದರ ಬರವಣಿಗೆ ಸ್ಪಷ್ಟವಾಗಿಲ್ಲ. ಆದರೆ ಈ ಶಿಲಾಶಾಸನದ ಮಾಹಿತಿ ಲಭ್ಯವಗಿದ್ದು ಈ ಶಿಲಾಶಾಸನವನ್ನು ಬಲಾಢ್ಯರು ಮತ್ತು ಶಕ್ತಿವಂತರು ನಿರ್ಮಿಸಿರಬಹುದು ಎಂದು ನಂಬಲಾಗಿದೆ.

ಚಿಕ್ಕೋಡಿ ತಾಲೂಕಿನ ಸ್ಥವನಿಧಿ ಒಂದು ಪವಿತ್ರ ಜೈನ ಕ್ಷೇತ್ರವಾಗಿದ್ದು ಇಲ್ಲಿಯೂ ಒಂದು ಶಿಲಾಶಾಸನ ನಮಗೆ ಲಭ್ಯವಾಗಿದ್ದು ಈ ಶಿಲಾಶಾಸನವನ್ನು ಕ್ರಿ. ಶ. ೧೪೦೦ ರಲ್ಲಿ ಸ್ಥಾಪಿಸಲಾಯಿತು. ಈ ಶಿಲಾಶಾಸನವು ಲಕ್ಷ್ಮಣ ಭಟ್ಟಾರಕ ಎಂಬುವನು ಪಾರ್ಶ್ವನಾಥ ಮೂರ್ತಿಯನ್ನು ಲೀಲಾದೇವಿಯು ಬಸದಿಯನ್ನು ನಿರ್ಮಿಸಿದಳು ಈ ಲಿಲಾದೇವಿ ಸೀನಾರಸ ರಾಜಮನೆತನದ ಹಿರಿಯ ಅಜ್ಜಿಯಾಗಿದ್ದಳು ಎಂದು ತಿಳಿಸುತ್ತದೆ.

* ಚಿಕ್ಕೋಡಿ ತಾಲೂಕಿನ ಯಕ್ಸಂಬಾ ಗ್ರಾಮದ ಮಹಾದೇವ ಮಂದಿರದ ಶಿಲಾಶಾಸನ ಕಲ್ಯಾಣಿ ಕಲಚೂರಿ ಬಿಜ್ಜಳನ ಕಾಲಾವಧಿಯಾಗಿದ್ದು ಈ ಶಿಲಾಶಾಸನವು ಕನ್ನಡ ಭಾಷೆಯಲ್ಲಿದ್ದು ಮಹಾದೇವ ಮಂದಿರದ ಬಗ್ಗೆ ಮಾಹಿತಿಯನ್ನು ನೀಡುತ್ತದೆ.

* ಚಿಕ್ಕೋಡಿ ತಾಲೂಕಿನ ಇನ್ನೊಂದು ಗ್ರಾಮ ಬೆಡಕಿಹಾಳ ಈ ಗ್ರಾಮದಲ್ಲಿ ನಮಗೆ ತಾಮ್ರಪಟ ಶಾಸನ ದೊರೆತಿದ್ದು, ಇದರ ಕಾಲಕಮಾನ ಕ್ರಿ. ಶ. ೧೦೦೦ ವಾಗಿದ್ದು ಇದು ಕಲ್ಯಾಣಿ ಚಾಲುಕ್ಯರ ಇವು ಬೆಡಂಗ ಸತ್ಯಾಶ್ರಯ ಕಾಲದ್ದಾಗಿದ್ದು ಕಲ್ಯಾಣಿ ಚಾಲುಕ್ಯರ ಆಡಳಿತದ ವ್ಯಾಪ್ತಿಗೆ ಬೆಡಕಿಹಾಳ ಪ್ರದೇಶ ಒಳಪಟ್ಟಿತ್ತು ಎಂಬ ಮಾಹಿತಿಯನ್ನು ನೀಡುತ್ತದೆ.

* ಈ ಶಿಲಾಶಾಸನಗಳ ಜೊತೆಗೆ ಭೋಜ ಗ್ರಾಮದ ಮತ್ತೊಂದು ತಾಮ್ರಪಟ ಶಾಸನ ನಮಗೆ ಲಭ್ಯವಾಗಿದ್ದು, ಇದು ಕೃತಕ ತಾಮ್ರಪಟ ಶಾಸನವಾಗಿದ್ದರೂ, ಬೆಳಗಾವಿ ಜಿಲ್ಲೆಯಲ್ಲಿ ದೊರೆತ ಎರಡನೆಯ ಅತಿ ಪ್ರಾಚೀನ ಶಾಸನ ಇದಾಗಿದೆ. ಇದು ಕದಂಬ ದೊರೆ ಶಾಂತಿವರ್ಮನ ಕಾಲದ್ದಾಗಿದ್ದು ಶಾಸನವನ್ನು ೭೪೮ ನೇ ಶತಮಾನ ಕಾಲದಲ್ಲಿ ಅದೇ ರೀತಿಯಾಗಿ ಮರು ಬರವಣೆಗೆಗೆ ಒಳಪಡಿಸಲಾಗಿದೆ. ಈ ಶಾಸನದಲ್ಲಿ ಭೋಜ ಗ್ರಾಮವನ್ನು "ಭೋಯಿಜ" ಎಂದು ಹೆಸರಿಸಲಾಗಿದೆ[೧]. ಕ್ರಿ.ಶ. ೬ನೇ ಶತಮಾನದವರೆಗೆ ಹಲಶಿಯನ್ನು ತಮ್ಮ ದ್ವಿತಿಯ ರಾಜಧಾನಿಯನ್ನಾಗಿ ಇಟ್ಟುಕೊಂಡು ಆಳುತ್ತಿದ್ದ ಆದಿ

ಕದಂಬರ ವಶದಲ್ಲಿತ್ತು ಎಂದು ಹೇಳಬಹುದು ನಂತರ ಕರ್ನಾಟಕದಲ್ಲಿ ಬಲಾಢ್ಯವಾದ ಸಾಮ್ರಾಜ್ಯವನ್ನು ಕಟ್ಟಿ ಆಳಿದ ಬಾದಾಮಿ ಚಾಲುಕ್ಯರು ಈ ಪ್ರದೇಶವನ್ನು ಆದಿ ಕದಂಬರಿಂದ ಕಿತ್ತುಕೊಂಡು ತಮ್ಮ ಆಡಳಿತಕ್ಕೆ ಒಳಪಡಿಕೊಂಡರು. ಬದಾಮಿ ಚಾಲುಕ್ಯರ ಸರ್ವ ಶ್ರೇಷ್ಠ ದೊರೆ ಇಮ್ಮಡಿ ಪುಲಕೇಶಿಯ ತಮ್ಮ ವಿಷ್ಣುವರ್ಧನನು ಪೂರ್ವದ ವಂಗೀಯ ರಾಜ್ಯಪಾಲನಾಗಿ ಹೋಗುವದಕ್ಕಿಂತ ಮುಂಚೆ ಈಗಿನ ಮಿರ್ಜಿ (ಮಿರಜ) ಪ್ರದೇಶದಲ್ಲಿ ಆಳುತ್ತಿದ್ದ. ಅದೇ ರೀತಿ ಪುಲಕೇಶಿಯ ಚಂದ್ರಾದಿತ್ಯನು ಈಗಿನ ಸಾವಂತವಾಡಿ ಪ್ರದೇಶದಲ್ಲಿ ರಾಜ್ಯಪಾಲನಾಗಿದ್ದ. ಆದ್ದರಿಂದ ಇವೆರಡು ಪ್ರದೇಶಗಳ ನಡುವೆ ಬರುವ ಚಿಕ್ಕೋಡಿ ಪ್ರದೇಶ ಸಹಜವಾಗಿಯೇ ಬಾದಾಮಿ ಚಾಲುಕ್ಯರ ಆಧಿನದಲ್ಲಿತ್ತೆಂದು ಹೇಳಬಹುದು. ಪ್ರತ್ಯಕ್ಷವಾಗಿ ಬದಾಮಿ ಚಾಲುಕ್ಯರ ಮತ್ತು ಬನವಾಸಿ ಕದಂಬರ ಕಾಲದ ಸ್ಪಷ್ಟ ಮಾಹಿತಿಗಳು ನಮಗೆ ಈ ಪ್ರದೇಶದಲ್ಲಿ ಲಭ್ಯವಾಗಿದ್ದರೂ ಪರೋಕ್ಷವಾಗಿ ಸಿಗುವ ದಾಖಲೆಗಳನ್ನು ಆಧ್‌ರಿಸಿ ಈ ಪ್ರದೇಶದ ಮೇಲೆ ಅವರ ಆಡಳಿತದ ಅಧಿಕಾರ ಇತ್ತೆಂದು ದೃಢಪಡಿಸಬಹುದಾಗಿದೆ. ಅದೇ ರೀತಿ ನಂತರ ಬಂದ ರಾಷ್ಟ್ರ ಕೂಟರ ಕಾಲಾವಧಿಯ ದಾಖಲೆಗಳು ಚಿಕ್ಕೋಡಿ ಪ್ರದೇಶದಲ್ಲಿ ದೊರೆಯದಿದ್ದದರೂ ಚಿಕ್ಕೋಡಿ ಸಮೀಪದ ಸಾಮಾನ ಘಡದಲ್ಲಿ ದೊರೆತ ರಾಷ್ಟ್ರಕೂಟ ದೊರೆ ದಂತಿದುರ್ಗನ ತಾಮ್ರ ಪಟಗಳು ಮತ್ತು ಗೋಕಾಕದಲ್ಲಿ ದೊರೆತ ತಾಮ್ರ ಪಟಗಳಿಂದ ಈ ಭಾಗ ರಾಷ್ಟ್ರಕೂಟರ ರಾಜಕೀಯ ಆಡಳಿತಕ್ಕೆ ಒಳಪಟ್ಟಿತ್ತು ಎಂದು ನಿರ್ಧರಿಸಲಾಗಿದೆ. ಇವರ ಕಾಲದಲ್ಲಿ ಈ ಪ್ರದೇಶ ಯುದ್ಧ ದಂತಹ ಭಯ ಭೀತಿಗಳಿಗೆ ಒಳಗಾಗದೇ ಶಾಂತಿ ಸುವ್ಯವಸ್ಥೆ ಈ ಪ್ರದೇಶದಲ್ಲಿ ನೆಲೆಸಿತ್ತು ಎಂದು ಹೇಳಬಹುದು.

೧೦ ನೆಯ ಶತಮಾನದ ಕೊನೆಯ ಭಾಗದಲ್ಲಿ ರಾಷ್ಟ್ರಕೂಟರು ತಮ್ಮ ಅಧಿಕಾರವನ್ನು ಬಾದಾಮಿ ಚಾಲುಕ್ಯರ ಒಂದು ಶಾಖೆಯಾದ ತರ್ದವಾಡಿಯ ಚಾಲುಕ್ಯ ದೊರೆಯಾದ ತೈಲಪನಿಗೆ ಒಪ್ಪಿಸಬೇಕಾಯಿತು. ಈ ಅವಧಿಯಲ್ಲಿ ದಕ್ಷಿಣಾಪಥದಲ್ಲಿ ರಾಜಕೀಯ ಬೆಳವನಿಗೆಗಳಲ್ಲಿ ಕ್ಷಿಪ್ರಕಾರಿ ಬದಲಾವಣೆಗಳು ಕಂಡು ಬರುವುದರೊಂದಿಗೆ ಹಲವಾರು ಸಾಮಂತರು ಮಹಾಮಂಡಳೇಶ್ವರರು ಅಸ್ತಿತ್ವಕ್ಕೆ ಬಂದರು. ಈ ಪ್ರದೇಶದಲ್ಲಿ ಕರಹಾಡದ ಶಿಲಾಹಾರರು ಗೋವೆಯ ಕದಂಬರು ಸವದತ್ತಿಯ ರಟ್ಟರು, ಸ್ವತಂತ್ರ ರಾಜರಂತೆ ಆಡಳಿತ ನಡೆಸಲು ಪ್ರಾರಂಭಿಸಿದರು. ಚಿಕ್ಕೋಡಿ ತಾಲೂಕಿನ ಬಹು ಭಾಗ ಪ್ರದೇಶವು ಕರಹಾಡದ ಶಿಲಾಹಾರ ದೊರೆಗಳ ಆಧಿಪತ್ಯಕ್ಕೆ ಒಳಪಟ್ಟಿತ್ತು. ಈ ಮನೆತನದವರು ಈಗಿನ ಕರಹಾಡ ವಾಳವೆ (ವಳವಾಡ) ಪನ್ನಾಳ (ಪನ್ನಾಳ ಗಡ) ಮತ್ತು ಕೊಲ್ಲಾಪೂರ ಗಳನ್ನು ಸಂಧರ್ಭಾನುಸಾರವಾಗಿ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಲು ಪ್ರಾರಂಭಿಸಿದರು. ಇವರ ಕಾಲದ ಅಂದರೆ ಕ್ರಿ. ಶ. ೯೮೮ ರ ತಾಮ್ರ ಶಾಸನ ಒಂದು ಚಿಕ್ಕೋಡಿ ತಾಲೂಕಿನ "ಪಟ್ಟಣಕುಡಿ" ಯಲ್ಲಿ ದೊರೆತಿದೆ.

ಹೀಗೆ ೧೩ ನೆಯ ಶತಮಾನದ ಮಧ್ಯಭಾಗದ ವರೆಗೆ ಬೇರೆ ಬೇರೆ ಕರ್ನಾಟಕದ ಕನ್ನಡದ ರಾಜ ಮನೆತನಗಳು ಈ ಪ್ರದೇಶವನ್ನು ಆಳುತ್ತಾ ಬಂದವು. ಕ್ರ ಶ. ೧೩೨೭ ದಿಲ್ಲಿಯನ್ನು ಆಳುತ್ತಿದ್ದ ಸುಲ್ತಾನರು ಈ ಪ್ರದೇಶವನ್ನು ಗೆದ್ದುಕೊಂಡರು. ಇದೇ ಸಂದರ್ಭದಲ್ಲಿ ದಕ್ಷಿಣ ಭಾರತದಲ್ಲಿ ಮತ್ತೆರಡು ಮಹಾನ ಸಾಮ್ರಾಜ್ಯಗಳು ಉದಯವಾದವು. ಕ್ರಿ ಶ. ೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯ ಮತ್ತು ೧೩೪೭ ರಲ್ಲಿ ಬಹುಮನಿ ಸಾಮ್ರಾಜ್ಯದ ಸ್ಥಾಪನೆಯೊಂದಿಗೆ ಈ ಪ್ರದೇಶ ಬಹುಮನಿ ಸುಲ್ತಾನರ ಆಡಳಿತಕ್ಕೆ ಒಳಪಟ್ಟಿತ್ತು. ಕ್ರಿ ಶ. ೧೪೮೯ ರ ಹೊತ್ತಿಗೆ ಬಹುಮನಿ ಸುಲ್ತಾನರ ಅಧಿಕಾರವನ್ನು ಧಿಕ್ಕರಿಸಿದ ವಿಜಾಪೂರದ ಆದಿಲ ಶಾಹಿಗಳು ಸ್ವತಂತ್ರತೆಯನ್ನು ಘೋಷಿಸಿಕೊಂಡು ಈ ಪ್ರದೇಶವನ್ನು ತಮ್ಮ ಆಧೀನಕ್ಕೆ ತೆಗೆದುಕೊಂಡು ಕ್ರಿ. ಶ. ೧೭೭೫ ರ ಕಾಲಾವಧಿಯ ವರೆಗೆ ತಮ್ಮ ಆಧಿಪತ್ಯಕ್ಕೆ ಒಳಪಡಿಸಿಕೊಂಡರು. ಕ್ರಿ. ಶ. ೧೭೭೫ ರ ನಂತರ ಮರಾಠರು, ಪೇಶ್ವೆಗಳು ಈ ಪ್ರದೇಶವನ್ನು ಗೆದ್ದುಕೊಂಡು ನಿಪ್ಪಾಣಿ, ನಣದಿ, ಮುಂತಾದ ಕಡೆಗಳಲ್ಲಿ ಕೊಲ್ಹಾಪೂರದ ಛತ್ರಪತಿಗಳು ಮತ್ತು ಅವರ ಸಂಬಂಧಿಕರು ಚಿಕ್ಕಪುಟ್ಟ ಸಂಸ್ಥಾನಗಳನ್ನು ಸ್ಥಾಪಿಸಿಕೊಂಡು ಆಡಳಿತದ ವ್ಯಾಪ್ತಿಗೆ ಒಳಪಡಿಸಿ ಕೊಂಡಿದ್ದಾರೆ.

ವಿಜಾಪೂರದ ಸುಲ್ತಾನರ ಆಡಳಿತದ ೧೨ ವಿಭಾಗಗಳಲ್ಲಿ "ಮಿರಜ" ಕೂಡಾ ಒಂದಾಗಿತ್ತು. ನಂತರ ರಾಯಬಾಗ ಹೊಸ ಆಡೆಳಿತದ ವಿಭಾಗವಾಗಿ ಹೊರಹೊಮ್ಮಿದಾಗ ಚಿಕ್ಕೋಡಿ ತಾಲೂಕಿನ ಕೆಲವು ಪ್ರದೇಶಗಳು ಮಿರಜ ವಿಭಾಗಕ್ಕೆ ಮತ್ತು ಹೊಸದಾಗಿ ರಚಿತವಾದ ರಾಯಬಾಗ ವಿಭಾಗಕ್ಕೆ ಸೇರಿ ವಿಜಾಪೂರ ಸುಲ್ತಾನರ ಆಡಳಿತವನ್ನು ಕಂಡಿದೆ. ಈ ಕಾಲದಲ್ಲಿ ಆಡಳಿತಾತ್ಮಕ ವಿಭಾಗಗಳು ರಚನೆಗೊಂಡು ದೇಸಾಯಿ, ಸರ್‌ದೇಸಾಯಿ ನಾಡಗೌಡರ ಅಧಿಕಾರದ ವ್ಯಾಪ್ತಿಗೆ ಪ್ರದೇಶಗಳು ಒಳಪಟ್ಟವು. ಇವರಿಗೆ ಗ್ರಾಮದಲ್ಲಿನ ಪಟೇಲ, ಕಿಲ್ಲೇದಾರ, ಕುಲಕರ್ಣಿ ಮುಂತಾದವರು ಸಹಾಯಕರಾಗಿದ್ದರು. ಅನೇಕ ಜಾಗೀರದಾರರು ಸರದಾರರ ಬೆಂಬಲ ಸಹಾಯದಿಂದ ವಿಜಾಪುರ ಅರಸರು ೨೦೦ ವರ್ಷಗಳ ಕಾಲ ಈ ಪ್ರದೇಶದಲ್ಲಿ ಆಡಳಿತವನ್ನು ನಡೆಸಿದರು. ಆದರೆ ಬರ ಬರುತ್ತಾ ಆಡಳಿತ ವರ್ಗದ ನಿಷ್ಠೆ ಕುಸಿಯಲು ಆರಂಭಿಸಿ ವಿಜಾಪೂರ ಸುಲ್ತಾನರ ಆಧೀನದಲ್ಲಿ ಬೆಂಗಳೂರನ್ನು ಜಾಹಾಂಗೀರಿಯಾಗಿ ನೋಡಿಕೊಳ್ಳುತ್ತಿದ್ದ ಶಹಾಜಿ ಭೋಸಲೆ ಅಪರಿಮಿತ ಅಧಿಕಾರವನ್ನು ಹೊಂದಿದನು. ಮತ್ತೊಂದೆಡೆ ಆತನ ಮಗನಾದ ಶಿವಾಜಿ ಕ್ರಿ. ಶ. ೧೬೪೮ ರಲ್ಲಿ ವಿಜಾಪೂರದ ಸುಲ್ತಾನನ ವಿರುದ್ಧ ಬಂಡಾಯವೆದ್ದನು. ಇದರ ಪರಿಣಾಮದಿಂದಾಗಿ ಮುಂದೆ ಉಂಟಾದ ರಾಜಕೀಯ ಕ್ಷೇತ್ರ ಬದಲಾವಣೆಗಳಿಂದ ಚಿಕ್ಕೋಡಿ ಭಾಗ ೩ ರಿಂದ ೪ ವರ್ಷಗಳ ಕಾಲ ಮರಾಠಾ ಪೇಶ್ವೆಗಳ ಆಡಳಿತದ ವ್ಯಾಪ್ತಿಗೆ ಒಳಪಟ್ಟಿತ್ತು. ಕ್ರಿ ಶ. ೧೭೩೦ ರ ಹೊತ್ತಿಗೆ ಬೆಳಗಾವಿ ಜಿಲ್ಲೆಯ ಬಹು ಪ್ರದೇಶ ಕೊಲ್ಹಾಪೂರದ ಛತ್ರಪತಿಯ ಆಧೀನಕ್ಕೆ ಒಳಪಟ್ಟಿತ್ತು. ಆಗ ಚಿಕ್ಕೋಡಿ ಮತ್ತು

ನಾಗರಮುನ್ನೊಳ್ಳಿ ಗಳು ಮಹಲಗಳಾಗಿ ಹಲವು ಪರಗನಗಳನ್ನು ಹೊಂದಿದ್ದರು. ಕೊಲ್ಹಾಪೂರ ಮತ್ತು ಸಾತಾರಾ ಛತ್ರಪತಿಗಳ ನಡುವೆ ಈ ಪ್ರದೇಶದ ಸಲುವಾಗಿ ಹಲವಾರು ಬಾರಿ ಸಣ್ಣ ಪುಟ್ಟ ಆಂತರಿಕ ಕಲಹಗಳು ಜರುಗಿದವು. ೧೮ ನೆಯ ಶತಮಾನದ ಮಧ್ಯದ ಅವಧಿಯಲ್ಲಿ ಕೊಲ್ಹಾಪೂರದ ಛತ್ರಪತಿ ಎರಡನೆಯ ಸಂಭಾಜಿಯು ಚಿಕ್ಕೋಡಿಯನ್ನು ತನ್ನ ಆಡಳಿತದ ಪ್ರತ್ಯೇಕ ಮತ್ತು ಪ್ರಮುಖ ವಿಭಾಗವೆಂದು ವಿಂಗಡಿಸಿ ಅದರ ಮೇಲ್ವಿಚಾರಣೆಗಾಗಿ ಸಿದ್ದೋಜಿ ಘೋರ್ಪಡೆಯನ್ನು ನಾಡಗೌಡನೆಂದು ನೇಮಿಸಿದನು. ತೊರಗಲ್ ಮತ್ತು ಇತರ ಕೆಲವು ಭಾಗಗಳನ್ನು ಇದರೊಂದಿಗೆ ಸೇರಿಸಲಾಯಿತು. ಆದರೆ ಕೊಲ್ಹಾಪೂರದ ಆಡಳಿತಾಧಿಕಾರಿ ರಾಣೋಜಿ ಘಾಟಗೆಇಂಚಲಕರಂಜಿ ಮತ್ತು ಮಿರಜ ಸಂಸ್ಥಾನಿಕರ ಸಹಾಯದಿಂದ ಚಿಕ್ಕೋಡಿಯ ಸುತ್ತಲಿನ ಪ್ರದೇಶಗಳಲ್ಲಿ ದಂಗೆ ಗಲಭೆಗಳನ್ನು ಆರಂಭಿಸಿದ. ಮುಂದೆ ಪೇಶ್ವೆಗಳ ಆಡಳಿತದ ಕಾಲದಲ್ಲಿಯೇ ಈ ಪ್ರದೇಶಕ್ಕಾಗಿ ನಿರಂತರ ಹೋರಾಟಗಳು ಜರುಗಿವೆ.

ಕ್ರಿ. ಶ. ೧೭೬೪ರ ಹೊತ್ತಿಗೆ ಪೇಶ್ವೆ ಮಾಧವರಾಯನು ಚಿಕ್ಕೋಡಿ, ನಾಗರಮುನ್ನೋಳ್ಳಿ, ಮಿರಜ ರಾಜ ಮನೆತನಕ್ಕೆ ಸಂಬಂಧಿಸಿದ ಪರಶುರಾಮ ಪ್ರಭು ಪಟವರ್ಧನನಿಗೆ ವಹಿಸಿ ಕೊಟ್ಟನು. ಈ ಕ್ರಮವನ್ನು ಮರಾಠಾ ರಾಣಿ ಜೀಜಾಬಾಯಿ ಪ್ರತಿಭಟಿಸಿ ಸೈನ್ಯ ಸಮೇತಳಾಗಿ ಚಿಕ್ಕೋಡಿಯತ್ತ ಪ್ರಯಾಣ ಆರಂಭಿಸಿದಳು. ಈ ರಾಣಿಯನ್ನು ಪೇಶ್ವೆಗಳ ಸೈನ್ಯ ನಿಲ್ಲಿಸಿ ಭೋಜ, ಯಕ್ಸಂಬಾ, ಕಾಗಲ ಪ್ರದೇಶಗಳನ್ನು ವಶಪಡಿಸಿಕೊಂಡರು. ಮುಂದೆ ಮೂರನೆಯ ಶಿವಾಜಿ ಇದರ ಸೇಡು ತೀರಿಸಿಕೊಂಡು ಪರಶುರಾಮ ಪ್ರಭು ಪಟವರ್ಧನನಿಂದ ಚಿಕ್ಕೋಡಿ, ನಾಗರಮುನ್ನೋಳ್ಳಿಗಳನ್ನು ಕಿತ್ತುಕೊಂಡು ನಿಪ್ಪಾಣಿಯನ್ನು ದೇಸಾಯಿಗೆ ಒಪ್ಪಿಸಿದ. ಈ ಕಾರ್ಯದಿಂದ ಹತಾಶನಾದ ಪರಶುರಾಮ ಪ್ರಭು ಪಟವರ್ಧನ ಪೇಶ್ವೆಗಳ ಸಹಾಯವನ್ನು ಪಡೆದು ಛತ್ರಪತಿಯ ಸೈನ್ಯವನ್ನು ಚಿಕ್ಕೋಡಿ ತಾಲೂಕಿನ ಪಟ್ಟಣಕೊಡಿ ಗ್ರಾಮದ ಹತ್ತಿರ ಎದುರಿಸಿ ಹೋರಾಡಿ ಹತನಾದ.

ಚಿಕ್ಕೋಡಿ ಈ ಪ್ರದೇಶದ ರಾಜ ಮನೆತನಗಳ ಹೋರಾಟ ಮತ್ತು ಹಸ್ತಾಂತರಗಳಿಂದ ಕೂಡಿದೆ. ಛತ್ರಪತಿ ಮನೆತನ ಮತ್ತು ಪಟವರ್ಧನ ಮನೆತನಗಳು ಈ ಪ್ರದೇಶದ ಸಲುವಾಗಿ ಹಲವಾರು ಬಾರಿ ಯುದ್ಧ ನಡೆಸಿವೆ. ಈ ಯುದ್ಧ ಹೋರಾಟಗಳ ಜೊತೆಗೆ ಹಲವು ಜಾಗೀರದಾರರು ಸರ್ದಾರರ ಆಡಳಿತದ ವೈಖರಿ ಇನ್ನು ನಮಗೆ ಸಂಪೂರ್ಣವಾಗಿ ಲಭ್ಯವಾಗ ಬೇಕಾಗಿದ್ದು ಅದು ಲಭ್ಯವಾದಲ್ಲಿ ಚಿಕ್ಕೋಡಿ ತಾಲೂಕಿನ ಇತಿಹಾಸದ ಮೇಲೆ ಇನ್ನಷ್ಟು ಚಾರಿತ್ರಿಕ ಬೆಳಕನ್ನು ಹರಿಸಬಹುದಾಗಿದೆ.

ಚಿಕ್ಕೋಡಿ ತಾಲೂಕಿನ ಪ್ರಮುಖ ಪಟ್ಟಣವೆನಿಸಿದ ೧೬೮೫ ರ ಕಾಲಾವಧಿಯ ಹೊತ್ತಿಗೆ ಒಂದು ದೇಶಗತಿಯಾಗಿ ಅಸ್ತಿತ್ವಕ್ಕೆ ಬಂದಿತು. ಆಗ ಅಜಮ ನಗರದ (ಬೆಳಗಾವಿ) ಮೊಗಲ ಗವರ್ನರನಾಗಿ ಅಜಮಖಾನ ಎಂಬುವನು ಅಧಿಕಾರ ನಿಭಾಯಿಸುತ್ತಿದ್ದನು .

ಆ ಕಾಲದಲ್ಲಿ ಹುಕ್ಕೇರಿ ಪ್ರಾಂತಕ್ಕೆ ಸೇರಿದ ೧೪ ಹಳ್ಳಿಗಳನ್ನು ನಿಪ್ಪಾಣಿಯ ಈ ದೇಶಗತಿಗೆ ಇನಾಮು ನೀಡಲಾಯಿತು. ಇದರ ಸನದನ್ನು ೧೭೭೧ ರಲ್ಲಿ ಮರಾಠಾ ಪೇಶ್ವೆ ಹೊರಡಿಸಿದರು. ನಿಪನಾಳ, ಸಾಖರವಾಡಿ ಮತ್ತು ಯರಂಡವಾಡಿ ಗ್ರಾಮಗಳನ್ನು ಕೂಡಿಸಿ ಶ್ರೀಮಂತ ಸಿದ್ಧೋಜಿರಾವ ನಿಂಬಾಳಕರ ದೇಸಾಯಿ ನಿಪ್ಪಾಣಿ ನಗರವನ್ನು ಬೆಳೆಸಿದ. ಸಿದ್ಧೋಜಿರಾವ ದೇಸಾಯಿ ತಮ್ಮ ಸ್ವಸಾಮರ್ಥ್ಯದ ಮೇಲೆ ನಿಪ್ಪಾಣಿಯ ಆಸು ಪಾಸಿನ ಪ್ರಾಂತಗಳನ್ನು ಗೆದ್ದು ನಿಪ್ಪಾಣಿಯನ್ನು ತಮ್ಮ ಆಡಳಿತದ ಕೇಂದ್ರ ಸ್ಥಳವನ್ನಾಗಿ ಮಾಡಿಕೊಂಡು ಆಡಳಿತ ನಡೆಸತೊಡಗಿದರು. ಇನ್ನೊಂದೆಡೆ ನಿಪ್ಪಾಣಿಗೆ ಸಮೀಪದಲ್ಲಿಯೇ ಕೊಲ್ಹಾಪೂರವನ್ನು ಛತ್ರಪತಿ ಮನೆತನವನ್ನು ಆಳುತ್ತಿದ್ದು ಸರ್ಕಾರರು ಮತ್ತು ಛತ್ರಪತಿ ಇವರ ಮಧ್ಯೆ ಮೇಲಿಂದ ಮೇಲೆ ಘರ್ಷಣೆಗಳು ಜರುಗುತ್ತಿದ್ದವು. ನಿಪ್ಪಾಣಿ ಪ್ರದೇಶದ ಮುಖಂಡ ಮತ್ತು ಶ್ರೀಮಂತ ಮನೆತನದ ಸಿದ್ಧೋಜಿರಾವ ದೇಸಾಯಿ ಇವರು ಕ್ರಿ. ಶ. ೧೭೭೪ ರಿಂದ ಕ್ರಿ. ಶ. ೧೮೩೯ ರ ವರೆಗೆ ಅಂದರೆ ೬೫ ವರ್ಷಗಳ ಕಾಲ ಇವರ ಆಧಿಪಥ್ಯದಲ್ಲಿ ನಿಪ್ಪಾಣಿ ಪ್ರದೇಶವು ಒಳಪಟ್ಟಿತ್ತು. ಕ್ರಿ. ಶ. ೧೮೧೮ ರ ಕಾಲಾವಧಿಯ ವೇಳೆಗೆ ಮರಾಠಾ ರಾಜ್ಯ ಬ್ರಿಟೀಶರ ಆದಿಪಥ್ಯಕ್ಕೆ ಒಳಪಡುವುದರೊಂದಿಗೆ ನಿಪ್ಪಾಣಿ ಪ್ರದೇಶವು ಸಹ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು.

ನಿಪ್ಪಾಣಿ ಪ್ರದೇಶದ ಪೂರ್ವ ಇತಿಹಾಸವನ್ನು ಗಮನಿಸಿದಾಗ ಆ ನಗರದ ಜನಕನಾದ ಸಿದ್ಧೋಜಿರಾವ ದೇಸಾಯಿಯವರ ಪೂರ್ವದ ಚರಿತ್ರೆ ನಮಗೆ ತಿಳಿದು ಬರುತ್ತದೆ. ನಿಪ್ಪಾಣಿ ನಗರದ ಜನಕನಾದ ಸಿದ್ಧೋಜಿರಾವ ದೇಸಾಯಿ ನಿಪ್ಪಾಣಿ ಪ್ರದೇಶದ ಪ್ರಮುಖ ವ್ಯಕ್ತಿಯಾಗಿದ್ದು ಈ ಮನೆತನದವರು ಮೊದಲಿನಿಂದಲೂ ಹೋರಾಟ ಮನೋಭಾವನೆಯಿಂದ ಕೂಡಿದವರಾಗಿದ್ದು ಉತ್ತರ ಭಾರತದಿಂದ ದಕ್ಷಿಣದಲ್ಲಿ ತಮ್ಮ ಕರ್ತವ್ಯಕ್ಕೆಂದು ಆಗಮಿಸಿದಾಗ ದಕ್ಷಿಣದಲ್ಲಿನ ಒಂದು ಪ್ರಾಂತವನ್ನು ಗೆದ್ದು ಜಾಂಗೀರಿಯನ್ನು ನಿರ್ಮಿಸಿದನು. ಈ ಜಾಂಗೀರಿ ನಿರ್ಮಾಣ ಕಾರ್ಯದಲ್ಲಿ ಸಿದ್ಧೋಜಿರಾವ ದೇಸಾಯಿ ಯವರ ಪೂರ್ವಜರ ಪಾತ್ರ ಅತೀ ಪ್ರಮುಖವಾಗಿದೆ. ಸಿದ್ಧೋಜಿರಾವ ದೇಸಾಯಿ ಯವರ ಪೂರ್ವಜರು ಮೂಲತಃ ಉಜ್ಜೈನಿಯ ಪ್ರಸಿದ್ಧ ಕ್ಷತ್ರೀಯ ಮನೆತನದಲ್ಲಿ ಜನಿಸಿದವರಾಗಿದ್ದಾರೆ. ಮೊದಲು ಲಿಂಗಾಯಿತರಾಗಿದ್ದ ಇವರು ನಂತರ ಮರಾಠಾ ಧರ್ಮವನ್ನು ಸ್ವೀಕರಿಸಿದರು. ಈ ಮನೆತನದ ಇಬ್ಬರು ಮಹಾ ಪುರುಷರು ದಕ್ಷಿಣದ ಕಡೆಗೆ ಬಂದು 'ಧಾರ' ಮತ್ತು 'ದೇವಾಸ' ಎಂಬ ಎರಡು ಪ್ರದೇಶಗಳಲ್ಲಿ ತಮ್ಮ ನೆಲೆಗಳನ್ನು ಕಂಡುಕೊಂಡರು. ಕೆಲವು ವರ್ಷದ ತರುವಾಯ ಇದೇ ಮನೆತನದ ನಾಲ್ಕು ಜನ ಸೇರಿಕೊಂಡು ಈಗಿನ ಮಹಾರಾಷ್ಟ್ರದಲ್ಲಿನ ಸಾತಾರಾ ಹತ್ತಿರದ ನಿಂಬಸ (ನಿಂಬಹಾರ) ರಾಜ್ಯವನ್ನು ಸ್ಥಾಪನೆ ಮಾಡಿದರು. ಈ ನಿಂಬಹಾರ ಪ್ರದೇಶವನ್ನು ಆಳಿದ ಮನೆತನಕ್ಕೆ ನಿಂಬಾಳಕರ ಎಂದು ಹೆಸರು ಬಂದಿತು. ನಿಂಬಾಳಕರರು ಮತ್ತು ಸಾತಾರಾದ

ಆಡಳಿತಗಾರರು ಸಂಬಂಧಿಕರೇ ಆಗಿದ್ದು ಈ ಪ್ರದೇಶದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ಇದೇ ವೇಳೆಗೆ ದಕ್ಷಿಣದಲ್ಲಿ ಪ್ರವರ್ಧಮಾನಕ್ಕೆ ಬಂದ ವಿಜಾಪೂರದ ಆದಿಲ್ ಶಾಹಿ ಮನೆತನದವರು ಈ ಮರಾಠಾ ಪ್ರದೇಶಗಳ ಮೇಲೆ ದಾಳಿಯನ್ನು ಮಾಡಿ ಈ ಪ್ರಾಂಥವನ್ನು ತಮ್ಮ ಆಡಳಿತದ ಕಕ್ಷೆಗೆ ತೆಗೆದುಕೊಳ್ಳುವದರೊಂದಿಗೆ ವಿಜಾಪೂರಕ್ಕೆ ಸೇರಿಸಿ ಕೊಳ್ಳಲಾಯಿತು. ಈ ಪ್ರದೇಶದ ಮುಖಂಡನಾದ ನಿಂಬಾಳಕರ ಇವನಿಗೆ ವಿಜಾಪೂರದ ಸುಲ್ತಾನನು ನೂರು ಕುದುರೆಗಳ ಮುಖಂಡನನ್ನಾಗಿ ನೇಮಿಸಿದನು. ಇಲ್ಲಿಂದ ಮುಂದೆ ಈ ಮನೆತನಕ್ಕೆ ನಾಯಿಕ ಮನೆತನ ಎಂಬ ಅಡ್ಡ ಹೆಸರಿನೊಂದಿಗೆ ಪ್ರಸಿದ್ಧಿಯನ್ನು ಪಡೆದುಕೊಂಡರು. ಇದೇ ಸಮಯದಲ್ಲಿ ವಿಜಾಪುರದ ಸುಲ್ತಾನನ ಒಂದು ಕುದುರೆ ತನ್ನ ಬೆನ್ನಿನ ಮೇಲೆ ಯಾರನ್ನೂ ಕುಳ್ಳಿಸಿಕೊಳ್ಳಲು ಕೊಡುತ್ತಿರಲಿಲ್ಲ. ಅದನ್ನು ಪಳಗಿಸಿದ ನಿಂಬಾಳಕರರು ಅದರ ಮೇಲೆ ಕುಳಿತುಕೊಂಡು ಹುಕ್ಕೇರಿ, ಬೆಳಗಾವ ಮತ್ತು ದಾಂಡೇಲಿ ಭಾಗದ ೧೭೦ ಹಳ್ಳಿಗಳನ್ನು ತಿರುಗಾಡಿ ಮರಳಿ ಹೋದರು. ಇದಕ್ಕೆ ಪ್ರತಿ ಫಲವಾಗಿ ವಿಜಾಪೂರದ ಸುಲ್ತಾನನಿಂದ ಇವರಿಗೆ ದೇಸಗತಿ ಸಿಕ್ಕಿತು. ಇದರಿಂದ ಇವರಿಗೆ ದೇಸಾಯಿ ಎಂದು ಅಡ್ಡ ಹೆಸರು ಬಂದಿತು.

ಆದಿಲಶಾನ ದರ್ಬಾರದಲ್ಲಿ ನಿಂಬಾಳಕರ ಮನೆತನಕ್ಕೆ ಹುಕ್ಕೇರಿ ಪರಗಣದ ೪೦ ಗ್ರಾಮಗಳನ್ನು ಇನಾಮು ಕೊಟ್ಟು ತನ್ನ ಸೈನ್ಯದಲ್ಲಿ ೫೦೦೦ (ಪಂಚ ಹಜಾರ) ಕುದುರೆಗಳ ಸರದಾರನನ್ನಾಗಿ ಮಾಡಿದರು. ಇದಕ್ಕಿಂತ ಮುಂಚೆ ನಿಂಬಹರದಿಂದ ಬಂದ ಇನ್ನೊಂದು ಗುಂಪು ಚಿಕ್ಕೋಡಿ ಭಾಗದ ನಣದಿ ಗ್ರಾಮದಲ್ಲಿ ತಮ್ಮ ದೇಶಗತಿಯನ್ನು ಸ್ಥಾಪನೆ ಮಾಡಿತು. ಈ ಮನೆತನದ ಇಬ್ಬರು ವ್ಯಕ್ತಿಗಳು ಅಕ್ಕೋಳದ ಕಡೆಗೆ ಬಂದು ಅಲ್ಲಿ ತಮ್ಮ ಮನೆತನವನ್ನು ಹುಟ್ಟುಹಾಕಿದರು. ಇದೇಮನೆತನದ ವಂಶಜರು ನಿಪ್ಪಾಣಿಯಲ್ಲಿ ದೇಸಾಯಿ, ನಾಯಿಕ, ನಿಂಬಾಳಕರ ಎಂಬ ಹೆಸರುಗಳಿಂದ ತಮ್ಮನ್ನು ಗುರುತಿಸಿಕೊಂಡರು.

ನಿಪ್ಪಾಣಿಯ ಪ್ರವರ್ತಕನಾದ ಸಿದ್ದೋಜಿರಾವ ದೇಸಾಯಿ ಕ್ರಿ. ಶ. ೧೭೭೪ ರಲ್ಲಿ ಅಕ್ಕೋಳದ ನಿಂಬಾಳಕರ ಮನೆತನದಲ್ಲಿ ಜನಿಸಿದರು. ಇವರ ಬಾಲ್ಯ ಜೀವನ ಕೊಲ್ಹಾಪುರದ ರಾಜವಾಡೆಯಲ್ಲಿ ಆಯಿತು. ಇವರು ಚತುರಮತಿಗಳು ಮತ್ತು ಬುದ್ಧಿ ಶಾಲಿಗಳಾಗಿದ್ದರಿಂದ ಕೊಲ್ಹಾಪೂರದ ಛತ್ರಪತಿ ಮೂರನೆಯ ಶಿವಾಜಿ ಮಹಾರಾಜನು ತನ್ನ ಆಸ್ಥಾನದಲ್ಲಿ ಈತನಿಗೆ ನೌಕರಿಯನ್ನು ನೀಡಿ ಸುಮಾರು ೧೨೦೦೦ ರೂಪಾಯಿಗಳ ಸಂಬಳವನ್ನು ನೀಡುತ್ತಿದ್ದರು. ಛತ್ರಪತಿ ಮಹಾರಾಜರು ಪಟ್ಟಣಕುಡಿ, ಶಿರಗುಪ್ಪಿ, ನಿಪ್ಪಾಣಿ, ಕೋಡ್ನಿ ಈ ಗ್ರಾಮಗಳನ್ನು ಇನಾಮು ಕೊಟ್ಟಿದ್ದರು. ಅವರು ಈ ಗ್ರಾಮಗಳ ಸೀಮೆಯನ್ನು ರೂಪಿಸಿ ಇವುಗಳ ರಕ್ಷಣೆಗೆ ಬೇರೆ ಕಡೆಯಿಂದ ಜನರನ್ನು ನಿಯುಕ್ತಿಗೊಳಿಸಿದ್ದರು. ಲಖನಾಪೂರ, ವಾಳಕಿ, ಗವಾನಿ, ಶಿಪ್ಪುರ, ಅರ್ಜುನಿ, ಯಮಗರ್ಣಿ, ನಿಪ್ಪಾಣಿ, ಲೇಂವಾಡಿ, ನಿಪನಾಳ ಈ ಭಾಗಗಳನ್ನೆಲ್ಲ ಒಳಗೊಂಡ ನಿಪ್ಪಾಣಿ ಪ್ರದೇಶಕ್ಕೆ ಸಿದ್ದೋಜಿರಾವ ದೇಸಾಯಿ ಯವರು ಜಾಗೀರದಾರರು ಆದರು.

ಕ್ರಿ. ಶ. ೧೭೯೯ ರಲ್ಲಿ ಭೂಮಿ ಕೋಟೆ ಕಟ್ಟಿದರು.ನಿಪ್ಪಾಣಿಯ ಉತ್ತರದಲ್ಲಿ ಇರುವ ಕಲ್ಲೋಳದಿಂದ ಯಕ್ಸಂಬಾದ ವರೆಗೆ ರಸ್ತೆ ನಿರ್ಮಾಣ ಕಾರ್ಯ ಮಾಡಿ ಸಾಮಾಜಿಕ ಕಾರ್ಯದಲ್ಲಿ ಭಾಗವಹಿಸಿದರು. ಅಲ್ಲದೆ ತಮ್ಮ ಆಡಳಿತದ ಕಾಲಾವಧಿಯಲ್ಲಿ ಅನಂತಪುರದ ಕೋಟೆಯನ್ನು ಗೆದ್ದು ಛತ್ರಪತಿ ಶಿವಾಜಿ ಮಹಾರಾಜರು ಈತನ ಶೌರ್ಯ ಪರಾಕ್ರಮಕ್ಕೆ ಮೆಚ್ಚಿ ತನ್ನ ಮಗಳಾದ ಯೇಸುಬಾಯಿಯನ್ನು ಕೊಡಲು ಮಾತುಕತೆಯನ್ನಾರಂಭಿಸಿದಾಗ ಯೇಸುಬಾಯಿ ಇದನ್ನು ವಿರೋಧಿಸಿದಳು ಆಗ ಇವರು ಶಿವಾಜಿಯ ಜೊತೆ ಯುದ್ಧ ಮಾಡಿ ಯೇಸುಬಾಯಿಯನ್ನು ವರಿಸಿದರು. ಸಿದ್ದೋಜಿರಾವ ದೇಸಾಯಿಯವರು ರಣವೀರ ಛತ್ರಪತಿ ಮಹಾರಾಜ ಪಟವರ್ಧನ ಪೇಶ್ವೆ ಮತ್ತು ಬ್ರಿಟಿಶರ ಜೊತೆ ಸಂಬಂಧವನ್ನು ಹೊಂದಿದರು. ಕ್ರಿ. ಶ. ೧೮೦೭ ರ ಹೊತ್ತಿಗೆ ಸಿದ್ದೋಜಿರಾವ ದೇಸಾಯಿ ಇವರು ಚಿಕ್ಕೋಡಿ, ಮುನವಳ್ಳಿ ತಾಲೂಕುಗಳನ್ನು ತಮ್ಮ ಆಧಿಪತ್ಯಕ್ಕೆ ವಹಿಸಿಕೊಂಡರು. ಕ್ರಿ. ಶ. ೧೮೦೮ ರಲ್ಲಿ ಔತ್ರಪತಿ ಎರಡನೆಯ ಶಿವಾಜಿ ಮಹಾರಾಜರ ನಡುವೆ ನಡೆದ ಕಾಳಗದಲ್ಲಿ ಸಿದ್ದೋಜಿರಾವ ಮೇಲುಗೈ ಸಾಧಿಸುವುದರೊಂದಿಗೆ ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಂಡರು. ಕ್ರಿ. ಶ. ೧೮೧೭ ರಲ್ಲಿ ನಡೆದ ಆಂಗ್ಲೋ ಮರಾಠಾ ಯುದ್ಧದಲ್ಲಿ ಮರಾಠಾ ಪ್ರದೇಶಗಳು ಬ್ರಿಟಿಷರ ಆಧೀನಕ್ಕೆ ಬರುವುದರೊಂದಿಗೆ ದೇಸಾಯಿಯುವರ ಪ್ರಭಾವವು ಸಹ ಕುಂದತೊಡಗಿತು. ಕ್ರಿ ಶ ೧೮೩೯ ಜುಲೈ ೨೮ ರಂದು ಸಿದ್ದೋಜಿರಾವ ದೇಸಾಯಿ ಇಹಲೋಕವನ್ನು ತ್ಯಜಿಸಿದರು. ಇವರಿಗೆ ಗಂಡು ಮಕ್ಕಳು ಇರಲಿಲ್ಲ. ಇವರ ಮಲತಾಯಿ ಮಗನಾದ ರಘುನಾಥರವರ ಮಗನಾದ ಮುರಾರಿರಾವ ಇವರನ್ನು ದತ್ತಕ ತೆಗೆದು ಕೊಂಡಿದ್ದರು. ಇವರ ಮರಣದ ತರುವಾಯ ಈತ ಜಾಗೀರದ ವಾರಸದಾರನಾದನು.

ನಿಪ್ಪಾಣಿ ನಗರದ ಕಾರಣಿಕರ್ತ ವ್ಯಕ್ತಿಗಳಾದ ಸಿದ್ದೋಜಿರಾವ ನಿಪ್ಪಾಣಿ ನಗರವನ್ನು ಸುಂದರ ಗೊಳಿಸಲು ಹಲವಾರು ಕ್ರಮಗಳನ್ನು ಕೈಗೊಳ್ಳುವುದರೊಂದಿಗೆ ತನ್ನ ಸಂಸ್ಥಾನದ ಸುತ್ತ ಮುತ್ತಲಿನ ಸಂಸ್ಥಾನಗಳೊಂದಿಗೆ ವಾಣಿಜ್ಯಕ ಸಂಬಂಧಗಳನ್ನು ಹೊಂದಿದ್ದನು. ನಿಪಾಣಿಯ ದೇವಾಲಯಗಳಿಗೆ ಅಪಾರವಾದ ದಾನ ದತ್ತಿಗಳನ್ನು ನೀಡಿ ಧಾರ್ಮಿಕ ಉದಾರತೆಯನ್ನು ತೋರಿಸಿದನು. ಈತನ ಕಾಲಾವಧಿಯಲ್ಲಿ ಮಮದಾಪೂರದಲ್ಲಿ ಭವಾನಿ ದೇವಾಯಲವನ್ನು ನಿರ್ಮಿಸಿದನು. ಈ ರೀತಿಯಾಗಿ ನಿಪ್ಪಾಣಿ ಪ್ರದೇಶ ದೇಸಾಯಿ ಆಡಳಿತದ ಕಾಲಾವಧಿಯಲ್ಲಿ ಅಭಿವೃದ್ಧಿ ಪಥದತ್ತ ಮುನ್ನುಗ್ಗಿತು.

ಕೊಲ್ಲಾಪೂರದ ತಾರಾರಾಣಿಯ ಆಡಳಿತದ ಕಾಲದಲ್ಲಿ ಜಾಂಗೀರಿಯನ್ನು ಪಡೆದುಕೊಂಡ ಇನ್ನೊಂದು ಮನೆತನ ಸೌಂದಲಗಾ ಕೋಟೆಯಲ್ಲಿತ್ತು. ಈ ಮನೆತನದ ಉತ್ತರಾಧಿಕಾರಿ ಭಗವಂತ ಅಪ್ಪಾಜಿ ಇನಾಮದಾರ ಎಂಬುವರು ಬೆಡಕಿಹಾಳ ಪ್ರದೇಶದ ಜಾಂಗೀರಿಯನ್ನು ಪಡೆದು ಅಲ್ಲಿ ನೆಲೆಸಿದ್ದರು. ಆಗಲೇ ಸೇನಾಠಾಣೆಯಾಗಿದ್ದ ಬೆಡಕಿಹಾಳ ಕೋಟೆ ಮತ್ತು ಬೆಡಕಿಹಾಳ ಸಂಸ್ಥಾನದ ಆಡಳಿತವನ್ನು ನೋಡಿಕೊಂಡು ಸುತ್ತ ಮುತ್ತಲಿನ

ಗ್ರಾಮಗಳ ಕಂದಾಯವನ್ನು ಸಂಗ್ರಹಿಸುವ ಜವಾಬ್ದಾರಿಯನ್ನು ನಿರ್ಮಿಸಿದರು. ಸಿದನೆರಲೆ, ಹರ್ಲೆ, ಹಾಲುಂಡಿ, ಸಿರಗೂರು, ಗ್ರಾಮಗಳ ಮೇಲೆ ಇವರು ಅಧಿಕಾರವನ್ನು ಪಡೆದಿದ್ದರು. ಕಂದಾಯದ ವಿಷಯದ ಸಂಬಂಧ ಕೊಲ್ಹಾಪೂರದ ಅರಸರೊಂದಿಗೆ ಇವರು ಬೆಡಕಿಹಾಳ ಪ್ರದೇಶದಲ್ಲಿ ಯುದ್ಧ ಮಾಡಬೇಕಾಯಿತು. ಕ್ರಿ. ಶ. ೧೮೮೭ ರಲ್ಲಿ ನಡೆದ ಪ್ರಥಮ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬೆಡಕಿಹಾಳದ ಸಂಸ್ಥಾನಿಕರು ಬಿಟೀಷರ ವಿರುದ್ಧ ಹೋರಾಡಿದ ಕುರುಹುಗಳು ನಮಗೆ ಕಂಡು ಬರುತ್ತವೆ.

ಚಿಕ್ಕೋಡಿ ಪ್ರದೇಶವಾದ ನಣದಿ ದೇಸಾಯಿಯವರ ಕಂದಾಯ ಭಾಗವಾಗಿತ್ತು. ಅಂಕಲಿ ಶಿತೋಳೆ ಮನೆತನದವರು ಆಡಳಿತದ ಮುಖ್ಯಸ್ಥರಾಗಿ ಬೇರೆ ಬೇರೆ ಪ್ರದೇಶಗಳನ್ನು ಹೊಂದಿದ್ದರು.ಅಂಕಲಿಂಯ ಶಿತೋಳೆಂಯವರು ಗ್ವಾಲಿಂಯರದ ಸಿಂಧಿಂಯಾ ಮನೆತನದವರೊಂದಿಗೆ ಸಂಬಂಧವನ್ನು ಹೊಂದಿದ್ದು ಅನೇಕ ದೇವಾಲಯಗಳಿಗೆ ಶಿಕ್ಷಣ ಪ್ರಸಾರಕ್ಕೆ ದಾನ ದತ್ತಿ ನೀಡಿದ್ದಾರೆ. ಕ್ರಿ. ಶ. ೧೮೧೮ ರ ಹೊತ್ತಿಗೆ ಜಮಖಂಡಿಯ ಪಟವರ್ಧನ ಮನೆತನದ ಶಾಖೆಯೊಂದು ಚಿಕ್ಕೋಡಿ ತಾಲೂಕಿನ ಚಿಂಚಣಿಯನ್ನು ಕೇಂದ್ರ ಸ್ಥಾನವನ್ನಾಗಿಟ್ಟುಕೊಂಡು ಆಡಳಿತ ನಡೆಸುತ್ತಿತ್ತು. ಸಂತಾನವಿಲ್ಲದ ಕಾರಣ ಈ ಪ್ರದೇಶ ಕ್ರಿ. ಶ. ೧೮೩೬ ರ ಹೊತ್ತಿಗೆ ಬ್ರಿಟಿಷ ಆಧಿಪಥ್ಯಕ್ಕೆ ಒಳಪಟ್ಟಿತು.

ಚಿಕ್ಕೋಡಿಯ ಸುತ್ತಮುತ್ತಲಿನ ಪ್ರದೇಶವನ್ನಾಳಿದ ರಾಜ ಮನೆತನಗಳು ತಮ್ಮ ಆಡಳಿತದ ಕೇಂದ್ರ ಸ್ಥಳಗಳಲ್ಲಿ ತಮ್ಮ ವಾಸಕ್ಕಾಗಿ ಆಡಳಿತಾತ್ಮಕ ಕಾರ್ಯಾಲಯಗಳನ್ನು ಹೊಂದಲು ರಾಜವಾಡೆಗಳನ್ನು ನಿರ್ಮಿಸಿ ಕೊಳ್ಳುತ್ತಿದ್ದರು. ಹಿಂದಿನ ಕಾಲದ ಮಾಹಿತಿಗಳನ್ನು ನೀಡಲು ರಾಜ್ಯವಾಡೆಗಳು ಮಹತ್ವದ ವಸ್ತುಗಳಾಗಿವೆ. ಈ ರಾಜ್ಯವಾಡೆಗಳನ್ನು ಕಲಾತ್ಮಕವಾಗಿ ನಿರ್ಮಿಸಲಾಗಿದ್ದು ಇವು ಸುಮಾರು ಪ್ರದೇಶವನ್ನು ಹೊಂದಿದ್ದು ಚಿಕ್ಕೋಡಿ ತಾಲೂಕಿನಲ್ಲಿ ಇಂತಹ ರಾಜ ವಾಡೆಗಳನ್ನು ನಾವು ಕಾಣಬಹುದಾಗಿದೆ. ಬೆಡಕಿಹಾಳದಲ್ಲಿರುವ ರಾಜವಾಡೆ ಸುಮಾರು ೧೦ ಎಕರೆ ವಿಸ್ತೀರ್ಣವನ್ನು ಹೊಂದಿದ್ದು ಹಳೆಯ ಕಾಲದ ರಚನೆ ಹೊಂದಿದೆ. ಈ ರಾಜವಾಡೆಯ ಸುತ್ತಲೂ ಎರಡು ಕೋಟೆ ಗೋಡೆಗಳನ್ನು ಅದರಾಚೆ ಆಳವಾದ ಕಂದಕವನ್ನು ಹೊಂದಿದೆ. ಸುಮಾರು ಮೂರು ನೂರು ವರ್ಷಗಳ ಹಿಂದಿನ ಕೋಟೆ ಕೊತ್ತಲ, ಬುರುಜುಗಳು ಇಲ್ಲಿ ಇಂದಿಗೂ ಸಮರ್ಥವಾಗಿ ನಿಂತಿವೆ. ಕೋಟೆಯ ಗೋಡೆ ಸುಮಾರು ೫೦ ಅಡಿ ಎತ್ತರವಿದ್ದು ಕೊನೆಯಲ್ಲಿ ೧೦ ಅಡಿ ಅಗಲ ಹೊಂದಿದೆ. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಅನೇಕ ಸತ್ಯಾಗ್ರಹಿಗಳು ಈ ವಾಡೆಯಲ್ಲಿ ಆಶ್ರಯವನ್ನು ಪಡೆದಿದ್ದರು.

ನಿಪ್ಪಾಣಿಯಲ್ಲಿರುವ ರಾಜವಾಡೆ ಸಿದ್ದೋಜಿರಾವ ದೇಸಾಯಿಯವರ ಅರಮನೆ ಆಡಳಿತ ಕಚೇರಿಯನ್ನು ಒಳಗೊಂಡಿತ್ತು.ಈ ಕೋಟೆಯ ಬಹುಪಾಲು ಹಾಳಾಗಿದ್ದು ಎರಡು ಪ್ರವೇಶ ದ್ವಾರಗಳು ಮಾತ್ರ ಉಳಿದಿವೆ. ರಾಜವಾಡೆಯ ಹೆಬ್ಬಾಗಿಲು ಭವ್ಯವಾಗಿದ್ದು

ಎದುರು ನಿಂತು ನೋಡಿದರೆ ನುಣುಪಾದ ಕಂದುಗೆಂಪು ಕಲ್ಲಿನ ಸೊಗಸಾದ ಜೋಡನೆ ಕಂಡು ಬರುತ್ತದೆ. ಇಲ್ಲಿಯ ಉಬ್ಬು ಶಿಲ್ಪ ರಚನೆಗಳು ಕಮಾನು ಶಿಲ್ಪ ಒಂದು ಕಾಲದ ಭವ್ಯತೆಗೆ ಸಾಕ್ಷಿಯಾಗಿ ನಿಂತಿವೆ. ಈ ನಿಪ್ಪಾಣಿಯ ರಾಜವಾಡೆ ಮೂರು ಅಂತಸ್ಥುಗಳನ್ನು ಹೊಂದಿದ್ದು ೫೦ ರಿಂದ ೬೦ ಕೋಣೆಗಳನ್ನು ಹೊಂದಿದೆ. ಇದರಲ್ಲಿ ಅತಿಥಿ ಗೃಹ; ವಿಶ್ರಾಂತಿ ಗೃಹ; ದಿವಾನಖಾಣೆ; ದರ್ಬಾರ ಕೋಣೆ, ಸಂಗೀತ ಕಚೇರಿ, ಶಯ್ಯಾಗಾರ ಸಭಾ ಭವನಗಳಿವೆ. ಇವೆಲ್ಲವೂ ದಪ್ಪವಾದ ಗೋಡೆಯನ್ನು ಹೊಂದಿದ್ದು ನಯವಾದ ಗಾರೆಯಿಂದ ಉತ್ತಮ ಕಟ್ಟಿಗೆಯಿಂದ ರೂಪಗೊಂಡಿವೆ. ಇಲ್ಲಿಯ ದರ್ಬಾರ ಕೋಣೆಯಲ್ಲಿರುವ ಕಟ್ಟಿಗೆಯ ಕಂಬಗಳಲ್ಲಿರುವ ಕೆತ್ತನೆಯ ವಿನ್ಯಾಸ ನೋಡುಗರ ಕಣ್ಮನ ಸೆಳೆಯುತ್ತವೆ. ನಿಪ್ಪಾಣಿ ರಾಜವಾಡೆಯು ಅತ್ಯಂತ ಪ್ರಮುಖವಾದ ಅಂಶಗಳನ್ನು ಒಳಗೊಂಡಿದ್ದು ಈ ರಾಜವಾಡೆಯಲ್ಲಿರುವ ಭಿತ್ತಿ ಚಿತ್ರಗಳು ಚಾವಡಿ ಶಯ್ಯಾಗೃಹ ಮತ್ತು ದರ್ಬಾರ ಕೋಣೆಗಳ ಮೇಲೆ ಗೋಡೆಯ ಮೇಲೆ ಬಿಡಿಸಿದ ಚಿತ್ರಗಳು ನಯನ ಮನೋಹರವಾಗಿವೆ. ಇಲ್ಲಿಯ ಚಿತ್ರಗಳ ಬಣ್ಣಗಾರಿಕೆ ಪ್ರಮಾಣ ಭದ್ಧತೆ ಭಾವಾಭಿವ್ಯಕ್ತ ಅಂತರದರ್ಶನ ಶೈಲಿಗಳು ಪರಿಣಾಮಕಾರಿಯಾಗಿವೆ. ಕೃಷ್ಣನ ಕಥಾನಕವನ್ನು ಬಿಂಬಿಸುವ ಇಲ್ಲಿನ ಚಿತ್ರಗಳು ಶೃಂಗಾರ; ಸಂವಾದ, ಕರುಣೆ; ಒಲುಮೆಗಳನ್ನು ಬಡಿದೆಬ್ಬಿಸುತ್ತವೆ. ಬಕಾಸುರನ ವಧೆ, ಕೃಷ್ಣ ರಾಧೆಯರ ಚಿತ್ರಗಳು ಉತ್ತರ ಕರ್ನಾಟಕದ ಯಾವದೇ ರಾಜವಾಡೆಯುಲಿಲ್ಲದಂತಹ ಭಿತ್ತಿ ಚಿತ್ರಗಳನ್ನು ಈ ರಾಜವಾಡೆಯಲ್ಲಿ ನಾವು ಕಾಣಬಹುದಾಗಿದೆ. ಭಿತ್ತಿ ಚಿತ್ರ ಹಾಗೂ ಅದರ ವಾಸ್ತು ಸ್ವರೂಪಕ್ಕಾಗಿ ಈ ರಾಜವಾಡೆ ವಿಶೇಷ ಮಹತ್ವತೆಯನ್ನು ಪಡೆದುಕೊಂಡಿದೆ. ರಾಸ ಲೀಲೆಗಳ ವಿವಿಧ ಭಂಗಿಗಳನ್ನು ಚಿಕಣಿ ಕಲೆಯಲ್ಲಿ ಅರಳಿಸಿದ್ದು ಇಲ್ಲಿನ ವಿಶೇಷ.

ಚಿಕ್ಕೋಡಿ ತಾಲೂಕು ವಂಟಮುರಿ ಸಂಸ್ಥಾನಿಕರ ಆಡಳಿತಕ್ಕೆ ಒಳಪಟ್ಟಿದ್ದು ಕಂದಾಯದ ಸಂಗ್ರಹಣೆಯ ಉದ್ದೇಶಕ್ಕಾಗಿ ಮತ್ತು ಆಡಳಿತದ ಅನುಕೂಲಕ್ಕಾಗಿ ಚಿಕ್ಕೋಡಿ ತಾಲೂಕಿನ ಕಮತೇನಹಟ್ಟಿ, ಶಿರಗಾವಿ, ಚಿಕ್ಕೋಡಿಗಳಲ್ಲಿ ೩ ವಾಡೆಗಳನ್ನು ಕಟ್ಟಿಸಿದ್ದರು. ಈ ವಾಡೆಗಳು ಈಹೊತ್ತಿಗೂ ಸಹ ಸುಸ್ಥಿತಿಯಲ್ಲಿವೆ. ಕಮತೇನಹಟ್ಟಿಯ ವಾಡೆಯು ಕೃಷಿ ನಿರ್ವಹಣೆಗಾಗಿ ಮತ್ತು ಬೇಸಿಗೆಯ ನಿವಾಸವಾಗಿ ಉಪಯೊಗವಾಗುತ್ತಿತ್ತು. ಶಿರಗಾವಿಯ ವಾಡೆಯು ಸುತ್ತಲು ಕೋಟೆಯನ್ನು ಹೊಂದಿದ್ದು, ಗೋಡೆ ಹೆಬ್ಬಾಗಿಲು ಬುರುಜುಗಳನ್ನು ಹೊಂದಿದೆ. ೨ ಅಂತಸ್ತಿನ ಭವ್ಯ ಚೌಕಿ ಮನೆಯವಾಡೆ ಒಳಗಿದೆ. ಈ ವಾಡೆಯು ಸಾಮಾನ್ಯ ಮರಗೆಲಸದಿಮದ ಅಲಂಕೃತವಾಗಿದೆ. ಜಗುಲಿ, ಹಜಾರ, ಶೈಯಾಗಾರ, ವಿಶ್ರಾಂತಿ ಕೋಣೆ, ಸಭಾ ಕೊಠಡಿಗಳು ಇಂದು ಸುಸ್ಥಿತಿಯಲ್ಲಿವೆ ಇಲ್ಲಿ ಶಿರಗಾವಿ ಪ್ರಧೇಶ ಹಿಂದೊಂದು ಕಾಲಕ್ಕೆ ಪ್ರಮುಖವಾದ ಆಡಳಿತದ ಕೇಂದ್ರವಾಗಿತ್ತು.

ವಂಟಮುರಿ ಸಂಸ್ಥಾನದ ಕಂದಾಯ ಸಂಗ್ರಹಣ ಅಧಿಕಾರ ಹೊಂದಿದ್ದ ಆಡಳಿತಾಧಿಕಾರಿಗಳ ನಿವಾಸವಾಗಿದ್ದ ಚಿಕ್ಕೋಡಿ ವಾಡೆ ಇಂದಿಗೂ ಸಹ ಸುಂದರವಾಗಿದ್ದು ಕಾಲಾಂತರದಲ್ಲಿ ಇಂದಿರಾಬಾಯಿ ಕುಲಕರ್ಣಿಯವರ ಸಂತತಿಗೆ ಸೇರಿತು. ಇದರ ಹೊರ ಗೋಡೆಯು ನುಣುಪಾದ ಕಲ್ಲು ರಚನೆಯಿಮದ ಕೂಡಿದ್ದು ಕಲಾತ್ಮಕವಾದ ಪ್ರವೇಶದ್ವಾರದಿಂದ ಗಮನ ಸೆಳೆಯುತ್ತದೆ. ನಿಪ್ಪಾಣಿ ಮತ್ತು ಬೆಡಕಿಹಾಳ ವಾಡೆಗಳು ದೇಶಿಯ ವಾಸ್ತುವಿನ ಗ್ರಾಮ್ಯ ರಚನೆ ನಿದರ್ಶನವಾಗಿದ್ದರೆ ಚಿಕ್ಕೋಡಿ ವಾಡೆಯು ಹಳೆಯ ಶೈಲಿಯ ಜೊತೆಗೆ ಯರೋಪಿನ ಮಾದರಿಯ ಗೋಪುರಾಕೃತಿಯ ಹೊಸ ಶೈಲಿಯನ್ನು ಅಳವಡಿಸಿಕೊಂಡಿದೆ. ಎರಡು ಅಂತಸ್ತಿನ ಈ ವಾಡೆಯಲ್ಲಿ ಸುಮಾರು ೨೫-೩೦ ಕೊಠಡಿಗಳಿವೆ. ಈ ವಾಡೆ ನೋಡುಗರ ಕಣ್ಣಿಗೆ ಮುದವನ್ನು ನೀಡುವುದಲ್ಲದೆ ಕಟ್ಟಿಗೆ ಕಂಬಗಳು ಮೇಲು ಹೊದಿಕೆಗಳು ಅಟ್ಟನಿಕೆ, ತಾರಸಿಂಯ ಒಳಹೊದಕೆಗಳು ಆಕರ್ಷಣೀಯವಾಗಿವೆ. ಮೊದಲು ಚೌಕಿಯ ಎಡಭಾಗದ ಕಾಷ್ಠ ಶಿಲ್ಪದ ಮೇಲು ಜಗುಲಿ ಇದರ ವಿಶೇಷವಾಗಿದೆ. ಅಲ್ಲಿಯ ಬಳ್ಳಿ ನಕ್ಷೆಗಳಿಂದ ಕೆತ್ತಲ್ಪಟ್ಟಿರುವ ಕಂಬಗಳು ಮತ್ತು ಫಲ ಪುಷ್ಪಗಳ ಉಬ್ಬು ಗೆತ್ತನೆಯ ಸಾಲು ಸಾಲಾದ ರಚನೆಗಳು ನೋಡುಗರ ಗಮನವನ್ನು ಸೆಳೆಯುತ್ತವೆ. ಮರಗೆತ್ತನೆಯಲ್ಲಿ ಅಲಂಕಾರ ಕೆತ್ತನೆಗಳು ನಾಜೂಕಿನಿಂದ ಕೂಡಿವೆ. ಇಲ್ಲಿ ಗಣೇಶನ ಪೂಜೆಗಾಗಿ ನಿರ್ಮಿಸಿರುವ ಮಾಡು, ಅದರ ಮುಂದೆ ಅಲಂಕಾರಿಕೆ ಸೊಗಸು ಬಹು ಸುಂದರವಾಗಿದೆ. ಈ ವಾಡೆಯಲ್ಲಿ ಕಂಡುಬರುವ ಕಾಷ್ಠ ಶಿಲ್ಪದ ರಚನೆಯನ್ನು ನಾವು ಬಹುಶ: ಸುತ್ತಲಿನ ರಾಜವಾಡೆಗಳಲ್ಲಿ ಕಾಣಲು ಸಾಧ್ಯವಿಲ್ಲ.

ಅಂಕಲಿಯಲ್ಲಿರುವ ಶಿತೋಳೆ ರಾಜಮನೆತನದ ವಾಡೆಯು ಒಂದು ಭವ್ಯ ರಚನೆಯಾಗಿದ್ದು ಭಾರತೀಯ ಮತ್ತು ಇಸ್ಲಾಂ ವಾಸ್ತು ಶಿಲ್ಪ ಶೈಲಿಯ ಸಂಯುಕ್ತ ರೂಪದ ರಚನೆಯಾಗಿದೆ. ಈ ವಾಡೆಯು ಎರಡು ಅಂತಸ್ತಿಯನ್ನು ಕೂಡಿದ್ದು ನೋಡುಗರ ತನು ಮನವನ್ನು ಶೆಳೆಯುತ್ತದೆ. ಅಂಕಲಿಯ ಊರಿನ ಸರಹದ್ದಿನಲ್ಲಿ ಗ್ವಾಲಿಯರ ರಾಜಕುಮಾರಿಯ ಸ್ಮರಣಾರ್ಥಕವಾಗಿ ಯುರೋಪ ಗೋಪುರ ಮಾದರಿಯಲ್ಲಿ "ಮನುರಾಜೆವಿಲ್ಲಾ" ವನ್ನು ನಿರ್ಮಿಸಿದ್ದು ಅದಕ್ಕಾಗಿ ಬಳಿಸಿದ ಕೆಲ ಉಕ್ಕಿನ ಜಾಲರಿಗಳನ್ನು ಬೇರೆ ಬೇರೆ ದೇಶಗಳಿಂದ ಆಮದಿಸಿಕೊಂಡು ಆ ಸ್ಮಾರಕಕ್ಕೆ ಬಳಿಸಲಾಗಿದೆ. ಅಷ್ಟೇ ಅಲ್ಲದೆ ಈ ಎರಡು ಅಂತಸ್ತಿನ ಭವ್ಯವಾದ ವಾಡೆಯ ಹೊರಭಾಗವು ನುಣುಪಾದ ಕಲ್ಲಿನ ಜೋಡನೆಯಾಗಿದೆ. ಈ ವಾಡೆಯ ಒಳಭಾಗದಲ್ಲಿ ವಿಶಾಲವಾದ ಉತ್ತಮ ಗಾಳಿ ಬೆಳಕು ಬೀರುವ ಕೊಠಡಿಗಳಿದ್ದು ಆ ಕೊಠಡಿಗಳು ರಾಜ್ಯ ಗಂಭೀರತೆಯನ್ನು ಸೂಚಿಸುತ್ತವೆ.

ಚಿಕ್ಕೋಡಿ ತಾಲೂಕಿನಾದ್ಯಂತ ಇನ್ನೂ ಹಲವಾರು ವಾಡೆಗಳು ಕಾಣಸಿಗುತ್ತವೆ. ಈ ತಾಲೂಕಿನ ಮಹತ್ವದ ನಗರವಾದ ನಿಪ್ಪಾಣಿಯಲ್ಲಿ ನಿಪ್ಪಾಣಿ ದೇಸಗತಿಯ ಸಮಕಾಲಿನಾದ ನಾಥ ಸಾಧು ಹಾಲಸಿದ್ಧನ ವಾಡೆಯು ಅಪ್ಪಾಚಿವಾಡಿಯಲ್ಲಿದೆ. ಪ್ರಸ್ತುತ

ದಿನದಲ್ಲಿ ಈ ವಾಡೆಯನ್ನು ಆರಾಧನಾ ಸ್ಥಳವಾಗಿರುವ ಕಟ್ಟಡವೇ ಒಂದು ಕಾಲದಲ್ಲಿ ಹಾಲಸಿದ್ಧನ ವಾಡೆಯಾಗಿತ್ತು. ಈ ವಾಡೆಯ ಹೊರಭಾಗದಲ್ಲಿ ಕುದುರೆಯ 'ಪಾಗಾ' ಇದ್ದು ಅದನ್ನು ಇಂದಿಗೂ ಕಾಣಬಹುದಾಗಿದೆ. ಈ ಅಪ್ಪಾಚಿವಾಡಿಯಿಂದ ಹತ್ತರವಿರುವ ಕುರ್ಲಿ ಮತ್ತು ಬೆನ್ನಾಡಿ ಗ್ರಾಮಗಳಲ್ಲಿ ವಾಡೆಗಳನ್ನು ನೋಡಬಹುದು. ಇಂಥಹ ಸಾಕಷ್ಟು ವಾಡೆಗಳು ತಾಲೂಕಿನಲ್ಲಿ ಧಾರಾಳವಾಗಿ ಕಾಣ ಸಿಗುವವು.

ಚಿಕ್ಕೋಡಿ ತಾಲೂಕು ರಾಜಕೀಯವಾಗಿ ಕರ್ನಾಟಕ ಹಾಗೂ ಭಾರತದ ರಾಜಕೀಯ ಪರಂಪರೆಯಲ್ಲಿ ತನ್ನದೇ ಆದ ಛಾಪನ್ನು ಬಹುದಿನದ ಹಿಂದಿನಿಂದಲೂ ಮೂಡಿಸುತ್ತಾ ಬಂದಿದೆ. ಭಾರತದ ಸ್ವಾತಂತ್ರ್ಯ ಪೂರ್ವದಲ್ಲಿ ಬೆಳಗಾವಿ ಜಿಲ್ಲೆ ಮುಂಬೈ ಇಲಾಖೆಯ ಕನ್ನಡದ ಜಿಲ್ಲೆಗಳಲ್ಲಿ ಪ್ರಮುಖವಾಗಿತ್ತು. ಅದರಲ್ಲಿಯೂ ವಿಶೇಷವಾಗಿ ಚಿಕ್ಕೋಡಿ ತಾಲೂಕು ಕೊಲ್ಹಾಪೂರದ ಸಂಸ್ಥಾನಕ್ಕೆ ಒಳಪಟ್ಟಿದ್ದರಿಂದ ಈ ತಾಲೂಕಿನ ಉತ್ತರ ಹಾಗೂ ಪಶ್ಚಿಮದ ಪ್ರದೇಶಗಳಲ್ಲಿ ಬಹು ಜನ ಮರಾಠಿ ಭಾಷಿಕರು ವಾಸವಾಗಿದ್ದರು. ಕೊಲ್ಹಾಪೂರದಿಂದ ಚಿಕ್ಕೋಡಿ ಕೇಂದ್ರಸ್ಥಾನ ೪೦ ಮೈಲುಗಳ ಅಂತರದಲ್ಲಿದೆ. ಅಲ್ಲದೆ ಈಗಿನ ಆಡಳಿತ ಕೇಂದ್ರ ಸ್ಥಳವಾದ ಬೆಳಗಾವಿಯಿಂದ ೭೪ ಕಿ.ಮಿ. ಅಂತರದಲ್ಲಿದ್ದು ಎರಡೂ ಪ್ರದೇಶಗಳ ಮಧ್ಯದ ವಿಶೇಷವಾದ ಹಾಗೂ ಮಹತ್ವದ ಪ್ರದೇಶ ಇದಾಗಿದೆ. ಈ ಭಾಗದಲ್ಲಿ ಅತೀ ಹಳೆಯ ಶೈಕ್ಷಣಿಕ ಸಂಸ್ಥೆಯೆಂದರೆ ಕೊಲ್ಹಾಪೂರದ ರಾಜಾರಾಮ ಕಾಲೇಜು ಪ್ರಸಿದ್ಧವಾದ ಕಾಲೇಜ ಆಗಿದೆ. ಈ ತಾಲೂಕಿನ ವ್ಯಾಪಾರ ವಾಣಿಜ್ಯಕ ವ್ಯವಹಾರ ತಾಲೂಕಿನ ಇನ್ನೊಂದು ಕೇಂದ್ರ ಸ್ಥಳವಾದ ನಿಪ್ಪಾಣಿಯಿಂದ ಕೊಲ್ಹಾಪೂರ ಹಾಗೂ ಮುಂಬೈ ಕಡೆಗೆ ವಿಸ್ತರಿಸಿ ತನ್ನ ವ್ಯಾಪಾರದ ಪ್ರದೇಶಗಳನ್ನು ವಿಸ್ತರಿಸಿಕೊಂಡಿದೆ. ಆದ್ದರಿಂದ ಮಹಾರಾಷ್ಟ್ರದ ಪ್ರಮುಖ ಕೇಂದ್ರಗಳಾದ ಮುಂಬೈ ಮತ್ತು ಪುಣೆ ಗಳಲ್ಲಿ ನಡೆಯುವ ರಾಜಕೀಯ ಚಿಂತನೆಯ ವಿಚಾರಗಳು ಚಿಕ್ಕೋಡಿಯತ್ತಲೂ ಸೂಸಿ ಬಂದಿವೆ. ರಾಜಕೀಯ ಚಳುವಳಿಯ ಪ್ರಮುಖ ಕೇಂದ್ರಗಳೆನಿಸಿದ ಮುಂಬೈ ಪುಣೆ ಪ್ರದೇಶಗಳಲ್ಲಿ ಮೂಡಿದ ರಾಜಕೀಯ ಜಾಗ್ರತೆ ಕರ್ನಾಟಕದ ಇನ್ನೂಳಿದ ಪ್ರದೇಶಗಳಲ್ಲಿ ಆರಂಭವಾಗುವಕ್ಕಿಂತ ಮುಂಚೆ ಆಗಲೇ ಆರಂಭವಾಗಿತ್ತು.

ಭಾರತ ದೇಶದ ಸ್ವತಂತ್ರ ಅಂದೋಲನದ ಆದ್ಯ ಪ್ರವರ್ತಕರು ಎಂದೆನಿಸಿದ ಬಾಲ ಗಂಗಾಧರ ತಿಲಕರವರ ನೇತೃತ್ವದ ಮರಾಠಿ ಭಾಷೆಯ "ಕೇಸರಿ" ದಿನ ಪತ್ರಿಕೆಯನ್ನು ಚಿಕ್ಕೋಡಿ ತಾಲೂಕಿನ ವಿದ್ಯಾವಂತ ಜನತೆ ಆರಂಭದಿಂದಲೂ ಓದುತ್ತಾ ಬಂದಿದ್ದಾರೆ. ಆರಂಭಿಕ ಕಾಲಾವಧಿಯ ರಾಜಕೀಯ ಬೆಳವಣಿಗೆಯ ಬೆನ್ನುಗಳಲ್ಲಿಯೇ ಕೊಲ್ಹಾಪೂರ ಸಂಸ್ಥಾನದ ಛತ್ರಪತಿ ಶಾಹೂ ಮಾಹಾರಾಜರು ನಡೆಸುತ್ತಿದ್ದ ಸತ್ಯ ಶೋಧರ ಚಳುವಳಿಯ ಪ್ರಭಾವ ಚಿಕ್ಕೋಡಿ ತಾಲೂಕಿನ ಮೇಲೆ ಆಗಿದೆ. ಸ್ವತಂತ್ರ ಪೂರ್ವ ಕಾಲದಲ್ಲಿ ಡಾ॥ಬಿ. ಆರ್. ಅಂಬೇಡಕರ ರವರು ಕ್ರಿ. ಶ. ೧೯೨೭ ರಲ್ಲಿ "ಚೌದಾರ" ಕೆರೆಯ

ನೀರನ್ನು ಮುಟ್ಟಿ ಅಸ್ಪೃಶ್ಯರು ಸಮಾಜದ ಉಳಿದ ಜನರಿಗಿಂತ ವಿಭಿನ್ನರಾಗಿಲ್ಲ ಎಂಬುದನ್ನು ಘೋಷಿಸಿದರು. ಅಂಬೇಡಕರರ ಈ ಚಳುವಳಿಯಲ್ಲಿ ಚಿಕ್ಕೋಡಿ ತಾಲೂಕಿನ ಬೆಡಕಿಹಾಳ ಗ್ರಾಮದ ಶ್ರೇಷ್ಠ ಸಾಮಾಜಿಕ ಕಾರ್ಯಕರ್ತ ರತ್ನಪ್ಪಾ ಸೂರ್ಯವಂಶಿ ಮತ್ತು ಇತರರು ಪಾಲ್ಗೊಂಡಿದ್ದರು. ಇದು ಸ್ವಾತಂತ್ರ್ಯ ಪೂರ್ವದಲ್ಲಿಯೇ ಈ ತಾಲೂಕಿನ ಜನರ ರಾಜಕೀಯ ಹಾಗೂ ಸಾಮಾಜಿಕ ಜಾಗ್ರತೆಯ ಮುನ್ಸೂಚನೆಯಾಗಿದೆ. ತಾಲೂಕಿನಲ್ಲಿರುವ ಮೇಲ್ವರ್ಗದ ಜನರು ವ್ಯಾಸಂಗಕ್ಕಾಗಿ ಸಮೀಪದ ನಗರ ಪ್ರದೇಶಗಳಾದ ಪುಣೆ ಮತ್ತು ಕೊಲ್ಹಾಪೂರಗಳಲ್ಲಿ ಅಧ್ಯಯನ ಗೈದು ಪಡೆದುಕೊಂಡ ಸ್ಫೂರ್ತಿಯನ್ನು ತಮ್ಮ ಸ್ವಗ್ರಾಮಕ್ಕೆ ತೆರಳಿದ ನಂತರ ಅಲ್ಲಿನ ಜನತೆಗೆ ಕಾಲೇಜಿನ ಅನುಭವ ಮತ್ತು ವಿಚಾರಗಳನ್ನು ಬಿಂಬಿಸಿದರು.

ವ್ಯಾಪಾರ ಶಿಕ್ಷಣ, ವಾಣಿಜ್ಯ ಉಧ್ಯಮಗಳೊಂದಿಗೆ ಕೊಲ್ಹಾಪೂರ ಮತ್ತು ಪುಣೆ ಸಂಗಡ ಹೊಂದಿದ ಸಂಬಂಧವು ಸಹ ಚಿಕ್ಕೋಡಿ ತಾಲೂಕಿನ ರಾಜಕೀಯ ಪರಂಪರೆ ಬೆಳೆಯುವಲ್ಲಿ ಸಹಾಯಕವಾದವು. ಈ ತಾಲೂಕಿನ ಜನರು ೨೦ ನೆಯ ಶತಮಾನದ ಆರಂಭಿಕ ಕಾಲಾವಧಿಯಲ್ಲಿಯೇ ರಾಜಕೀಯ ಜ್ಞಾನವನ್ನು ಪಡೆದಿದ್ದರು. ಮಹಾರಾಷ್ಟ್ರದಲ್ಲಿ ಹೊರಬರುತ್ತಿದ್ದ ವರ್ತಮಾನ ಪತ್ರಿಕೆಗಳಾದ 'ಜ್ಞಾನ ಪ್ರಕಾಶ' 'ನವಕಾಳ', 'ಕೇಸರಿ'. ಮೊದಲಾದ ಪತ್ರಿಕೆಗಳನ್ನು ಈ ತಾಲೂಕಿನ ಜನತೆ ಓದುತಿದ್ದರು. ಪೇಶ್ವೆ ರಾಜರ ಪ್ರಭಾವವು ಕೂಡಾ ಈ ಪ್ರದೇಶದ ಮೇಲಾಗಿದ್ದರಿಂದ ಮರಾಠಿ ಭಾಷೆ ತನ್ನ ಪ್ರಭುತ್ವವನ್ನು ಈ ತಾಲೂಕಿನ ಜನರ ಮೇಲೆ ಹೊಂದಿತು. ಇದರಿಂದಾಗಿ ಈ ತಾಲೂಕಿನ ಜನರು ಮರಾಠಿ ಬಾಷೆಯನ್ನು ಓದುವುದರಲ್ಲಿ ಮತ್ತು ಬರೆಯುವುದರಲ್ಲಿ ಪರಿಣತಿಯನ್ನು ಹೊಂದುವುದರ ಜೊತೆಗೆ ತಾಯಿ ನಾಡಿನ ಕನ್ನಡ ಭಾಷೆಯ ಜೊತೆಗೆ ಮರಾಠಿ ಬಾಂಧವ್ಯವನ್ನು ಬೆಳೆಸಿಕೊಂಡರು.

ಸ್ವಾತಂತ್ರ್ಯ ಸಂಗ್ರಾಮದ ಶ್ರೇಷ್ಠ ಕಲಿಯಂದೇ ಪರಿಣಿತರಾದ "ಬಾಲಗಂಗಾಧರ ತಿಲಕ" ಅವರು ತಮ್ಮ ಸ್ವತಂತ್ರ್ಯ ಉಕ್ತಿಯಾದ "ಸ್ವರಾಜ್ಯವೇ ನನ್ನ ಜನ್ಮ ಸಿದ್ಧ ಹಕ್ಕು" ಎಂದು ಚಿಕ್ಕೋಡಿ ನಿಪ್ಪಾಣಿ ಪ್ರದೇಶಗಳಲ್ಲಿ ಸಂಚರಿಸಿ ಈ ಭಾಗದ ಜನತೆಯಲ್ಲಿ ರಾಜಕೀಯ ಬೀಜವನ್ನು ಬಿತ್ತಿದರು"[೨]. ಚಿಕ್ಕೋಡಿ ತಾಲೂಕಿನ ಶಹಾಡೆಯವರಲ್ಲಿ ಬಾಲ ಗಂಗಾಧರ ತಿಲಕ ಅವರು ಅತಿಥಿಯಾಗಿ ಉಳಿದುಕೊಂಡು ಕ್ರಿ. ಶ. ೧೯೨೦ ರ ವೇಳೆಗೆ ಚಿಕ್ಕೋಡಿ ತಾಲೂಕಿನಲ್ಲಿ ಶೈಕ್ಷಣಿಕ ಚಳುವಳಿಯನ್ನು ಪ್ರಾರಂಭಿಸಿದರು. ಚಿಕ್ಕೋಡಿಯ ಗಣ್ಯ ವ್ಯಕ್ತಿಗಳೆಂದೆಣಿಸಿದ 'ಶ್ರೀ. ಸಖಾರಾಮ ಪಂಡಿತ', 'ಶ್ರೀ. ಮಜಲೀಕರ', ಶ್ರೀ.ಕುಲಕರ್ಣಿ', 'ಶ್ರೀ. ಸದಲಗೇಕರ' ಮುಂತಾದವರು ತಿಲಕರೊಂದಿಗೆ ಆತ್ಮೀಯವಾದ ಸಂಬಂಧವನ್ನು ಹೊಂದಿದ್ದರು. ಸ್ವತಂತ್ರ ಚಳುವಳಿಯ ಮತ್ತೊಬ್ಬ ರಾಷ್ಟ್ರೀಯ ನೇತಾರ ಹಾಗೂ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಕೇಂದ್ರ ಬಿಂದುವೇ ಎಂದೆನಿಸಿದ 'ಮಹಾತ್ಮಾ ಗಾಂಧೀಜಿ' ಯವರು ಕ್ರಿ. ಶ. ೧೯೩೩ ರಲ್ಲಿ ಚಿಕ್ಕೋಡಿ ತಾಲೂಕಿಗೆ ಭೆಟ್ಟಿಯನ್ನಿಟ್ಟು ಚಿಕ್ಕೋಡಿ ಹಾಗೂ ನಿಪ್ಪಾಣಿ

ಪ್ರದೇಶಗಳಲ್ಲಿ ಸಂಚರಿಸಿ ಸ್ವಾತಂತ್ರ್ಯ ಅಂದೋಲನದ ಚಳುವಳಿಗೆ ಇಲ್ಲಿನ ಜನತೆಯನ್ನು ಪ್ರೇರೇಪಿಸಿದರು. ಇವರು ಭಾಷಣ ಮಾಡಿದ ಚಿಕ್ಕೋಡಿ ಪ್ರದೇಶವನ್ನು 'ಗಾಂಧಿ ಬಜಾರ' ಎಂದು ಇಂದಿಗೂ ಕರೆಯಲಾಗುತ್ತದೆ.

ಗಾಂಧೀಯವರು ಇದೇ ವೇಳೆಯಲ್ಲಿ ನಿಪ್ಪಾಣಿ ನಗರದಲ್ಲಿಯೂ ತಂಗಿ ಸ್ವಾತಂತ್ರ್ಯ ಚಳುವಳಿಯ ಪ್ರೇರಣೆಯನ್ನು ನಿಪ್ಪಾಣಿ ಜನತೆಯಲ್ಲಿ ತುಂಬಿದರು. ಇಂತಹ ರಾಷ್ಟ್ರ ನಾಯಕರ ಸಂಚಾರದಿಂದ ಕ್ರಿ. ಶ. ೧೯೩೦ ರಿಂದ ಕ್ರಿ. ಶ. ೧೯೪೨ ರ ಮಧ್ಯದ ಕಾಲಾವಧಿಯಲ್ಲಿ ಈ ಭಾಗದಲ್ಲಿ ಸ್ವಾತಂತ್ರ್ಯ ಚಳುವಳಿಗಾರರ ಸಂಖ್ಯೆಯನ್ನು ಹೆಚ್ಚಿಸಿಕೊಂಡಿತು. ಚಿಕ್ಕೋಡಿ ಪ್ರದೇಶದ ಸಾಕಷ್ಟು ಪ್ರಮಾಣದ ಜನರು ಸ್ವಾತಂತ್ರ್ಯ ಚಳುವಳಿಯಲ್ಲಿ ಸೇರಿಕೊಂಡರು. ಇದರಿಂದಾಗಿಯೇ ತಾಲೂಕಿನಲ್ಲಿ ಸ್ವಾತಂತ್ರ್ಯ ಚಳುವಳಿಗಾರರ ಸಂಖ್ಯೆ ಹೆಚ್ಚಿಗೆ ಇದೆ. ಮಾಂಜರಿಯ 'ಅಪ್ಪಾಸಾಹೇಬ ಪಾಟೀಲ', ಯಕ್ಸಂಬಿಯ 'ದತ್ತಾ ಪಾಂಗಮ', 'ದಿನಕರ ಜೋಷಿ' ಅಂಕಲಿಯ 'ಬಸಪ್ಪಾ ಕುತಾಳೆ' ಬೆಡಕಿಹಾಳದ 'ಸಿದ್ದನಗೌಡಾ ಪಾಟೀಲ', 'ಅಣ್ಣಾಸಾಹೇಬ ಬೆಡಗೆ' ಮೊದಲಾದವರು ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರಾಗಿದ್ದಾರೆ. ಇವರೊಂದಿಗೆ ಅಕ್ಕೋಳ, ಬೋರಗಾಂವ, ಭೋಜ, ಮುಂತಾದ ಊರುಗಳಲ್ಲಿಯೂ ಹಲವಾರು ಜನ ಸ್ವಾತಂತ್ರ್ಯ ವೀರರೂ ಆಗಿ ಹೋದರು. ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡ 'ಎಸ್. ಎಲ್. ಬೆನಾಡಿಕರ' ಎಂಬವರು ಸುಪ್ರೀಂ ಕೋರ್ಟಿನ ವಕೀಲರಾಗಿಯೂ ಕಾರ್ಯವೆಸಗಿರು.

ಕ್ರಿ. ಶ. ೧೯೩೭ ರಲ್ಲಿ ನಡೆದ ಚುಣಾವನೆಯಲ್ಲಿ ನಿರ್ದಿಷ್ಟ ಸರಕಾರಿ ಕಂದಾಯ ಕೊಡುವ ವ್ಯಕ್ತಿಗಳು ಮಾತ್ರ ಮತದಾರರಾಗಿದ್ದ ಸಂದರ್ಭದಲ್ಲಿ 'ಶ್ರೀ. ಎ.ಬಿ.ಲಠ್ಠೆ', 'ಶ್ರೀ.ಎಮ್. ಪಿ. ಪಾಟೀಲ' ಹಾಗೂ 'ಶ್ರೀ ರಾಘವೇಂದ್ರ ಜೋಷಿ' ಇವರು ಈಗಿನ ಚಿಕ್ಕೋಡಿ ವಿಭಾಗದ ಹುಕ್ಕೇರಿ, ಚಿಕ್ಕೋಡಿ ಹಾಗೂ ಅಥಣಿ ತಾಲೂಕುಗಳನ್ನು ಒಳಗೊಂಡ ವಿಭಾಗದ ಮುಂಬೈ ಸರಕಾರದ ಕೆಳಮನೆಗೆ ಕಾಂಗ್ರೆಸಿನ ಅಭ್ಯರ್ಥಿಗಳೆಂದು ಆಯ್ಕಯಾದರು. ಅದೇ ಸಂದರ್ಭದಲ್ಲಿ ಚಿಕ್ಕೋಡಿ ತಾಲೂಕಿನ ಬೆನ್ನಾಡಿಯ 'ಶ್ರೀ ಬಳವಂತರಾವ ವರಾಳೆ' ಯವರು ಹರಿಜನ ಪ್ರತಿನಿಧಿಯಾಗಿ ಆಗಿನ ಮುಂಬೈ ಕೆಳಮನೆಗೆ ಆಯ್ಕೆಯಾದರು. ಡಾ॥. ಬಿ.ಆರ್. ಅಂಬೇಡಕರ ರವರ ನೇತ್ರತ್ವದಲ್ಲಿ ಉದಯವಾದ ಸ್ವತಂತ್ರ ಪಕ್ಷದ ಅಭ್ಯರ್ಥಿಯಾಗಿ ಆಯ್ಕೆಯಾದ ವರಾಳೆಯವರು ಹರಿಜನರ ಮೊದಲು ಪ್ರತಿನಿಧಿ ಯಾಗಿದ್ದಾರೆ.

ಈ ತಾಲೂಕಿನ ಅತೀ ದೊಡ್ಡ ಗ್ರಾಮ ಸದಲಗಾ. ಸದಲಗಾ ಪ್ರಂಚಾಯತಿಯ ಅಧ್ಯಕ್ಷರಾಗಿ ಕಾರ್ಯವನ್ನು ನಿರ್ವಹಿಸಿದ ಕೀರ್ತಿ ದಲಿತ ಮುಖಂಡ ಶ್ರೀ. ಪಿ. ಪಿ. ಹೆಗರೆಯವರಿಗೆ ಸಲ್ಲುತ್ತದೆ. ಇವರ ಈ ಮುಖಂಡತ್ವ ಈ ಭಾಗದ ಜನರಲ್ಲಿ ಮೂಡಿಸಿದ ರಾಜಕೀಯ ಪ್ರಜ್ಞೆಯ ಲಕ್ಷಣವಾಗಿದೆ. ಈ ಭಾಗದ ಹರಿಜನರು ಅಂಬೇಡ್ಕರರ ತತ್ವಗಳಿಗೆ

ಮಾರುಹೋಗಿದ್ದರಿಂದ ಕ್ರಿ. ಶ. ೧೯೪೨ ರಲ್ಲಿ ನಡೆದ ಚಳುವಳಿಯಲ್ಲಿ ಭಾಗವಹಿಸಿದ ಉದಾಹರಣೆಗಳು ಇಲ್ಲ. ಆದರೂ ಸಾಕಷ್ಟು ಕಾರ್ಯಕರ್ತರು ಖಾದಿ ಬಟ್ಟೆಯನ್ನು ಧರಿಸಿ ತಮ್ಮ ರಾಷ್ಟ್ರ ಪ್ರೇಮವನ್ನು ತೋರ್ಪಡಿಸಿದ್ದಾರೆ. ಸ್ವರಾಜ್ಯ ಬಂದ ಮೇಲೆ ಮೊದಲ ಚುನಾವಣೆಯಲ್ಲಿ ಈ ತಾಲೂಕು ಎರಡುವಿಧಾನ ಸಭಾ ಕ್ಷೇತ್ರಗಳನ್ನು ಹೊಂದಿದ್ದು ಕ್ರಿ. ಶ. ೧೯೫೨ ರಲ್ಲಿ ಜರುಗಿದ ಸಾರ್ವತ್ರಿಕ ಚುನಾವಣೆಯಲ್ಲಿ ಚಿಕ್ಕೋಡಿಯ ಎಸ್. ಡಿ. ಕೋಠಾವಳೆ (ವಕೀಲರು) ಹಾಗೂ ಮೀಸಲು ಕ್ಷೇತ್ರದ ಉಮೇದುವಾರರಾಗಿ ಶ್ರೀಮತಿ ಶ್ರೇಯ್ಕರಬಾಯಿ ಕಾಂಗ್ರೆಸ್ಸಿನ ಪರವಾಗಿ ವಿಜಯಿಯಾಗಿದ್ದರು. ಅದೇ ವರ್ಷ ಅಂಕಲಿಯ ಚಿದಾನಂದ ಕೋರೆಯವರು ಕಾಗವಾಡ ಮತ ಕ್ಷೇತ್ರದಿಂದ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಕ್ರಿ. ಶ. ೧೯೪೮ ರಲ್ಲಿ ಚಿಕ್ಕೋಡಿ ತಾಲೂಕಿನಲ್ಲಿ ಸಮಾಜವಾದದ ಅಲೆ ಬೀಸಿತು. ಕ್ರಿ. ಶ. ೧೯೪೮ ಎಪ್ರೀಲ ತಿಂಗಳಲ್ಲಿ ಕಾಂಗ್ರೇಸಿನ ಕಿಸಾನಸಭೆಯ ಮೊದಲ್ ಪರಿಷತ್ ಯಕ್ಸಂಬಾದಲ್ಲಿ ನಡೆದು 'ಉಳುವವನೇ ಭೂಮಿಯ ಒಡೆಯ' ಎಂಬ ಕಾಂಗ್ರೆಸ್ಸಿನ ವಿಚಾರ ಚುರುಕಿನಿಂದ ಪ್ರಚಾರಗೊಂಡು ಹಳ್ಳಿ-ಹಳ್ಳಿಗೂ ತಲುಪುವಂತಾಗಿತ್ತು. ಒಬ್ಬರು ಶ್ರೀಮಂತರು ಮತ್ತೊಬ್ಬರು ಬಡವರು ಇರಕೂಡದೆಂದು ಸಮಾಜವಾದದ ವಿಚಾರ ಈ ತಾಲೂಕಿನಲ್ಲಿ ವ್ಯಾಪಿಸತೊಡಗಿತು.

ರಾಷ್ಟ್ರದ ರಾಜಕೀಯ ವಿಚಾರವಂತ ನಾಯಕರಲ್ಲಿ ಒಬ್ಬರಾದ ಡಾ॥ ರಾಮ ಮನೋಹರ ಲೋಹಿಯಾ ಹಾಗೂ ಲೋಕ ನಾಯಕರೆಂದೇ ಪ್ರಸಿದ್ಧಿ ಪಡೆದ ಜಯಪ್ರಕಾಶ ನಾರಾಯಣರು ಚಿಕ್ಕೋಡಿಗೆ ಭೇಟ್ಟಿ ನೀಡಿದ್ದರು. ಇವರ ವಿಚಾರಗಳು ಈ ಭಾಗದ ತರುಣರ ಮೇಲೆ ಪ್ರಭಾವ ಬೀರದೇ ಇರಲಿಲ್ಲ. ಕ್ರಿ. ಶ. ೧೯೪೨ರ ಸ್ವಾತಂತ್ರ್ಯ ಚಳುವಳಿಯಲ್ಲಿ ರಾಷ್ಟ್ರೀಯ ಸೇವಾದಳ ಎಂಬ ಸಂಘ ಈ ಪ್ರದೇಶದ ತರುಣರಲ್ಲಿ ಸೇವಾ ಮನೋಭಾವನೆಯನ್ನು ಮೂಡಿಸಿ ಅವರ ವ್ಯಕ್ತಿತ್ವವನ್ನು ರೂಪಿಸಿತು. ಮಹಾರಾಷ್ಟ್ರದ ಸಾತಾರಾ ಜಿಲ್ಲೆಯಲ್ಲಿ ಜನ್ಮ ತಳೆದ ಪ್ರತಿ ಸರಕಾರದ ಪ್ರಭಾವ ಹಳ್ಳಿಯಲ್ಲಿಯ ಬಡ್ಡಿ ಹಣಕ್ಕೆ ಅಡವಿಟ್ಟುಕೊಂಡ ಜಮೀನುಗಳನ್ನು ಮುಕ್ತ ಮಾಡಿತು. ಪ್ರತಿ ಸರಕಾರದಾಗಿನ ಮುಖಂಡರಾದ ಶ್ರೀ ನಾನಾ ಪಾಟೀಲರು ಆಗ ಚಿಕ್ಕೋಡಿಗೆ ಬಂದಿದ್ದರು. ರೈತರನ್ನು ಸಾಲದಿಂದ ಮುಕ್ತ ಮಾಡುವ ಕಾಯ್ದೆಯನ್ನು ಮುಂಬೈಸರಕಾರ ಘೋಷಿಸಿದಾಗ ಹಲವಾರು ಜನ ರೈತರು ಸಾಲದಿಂದ ಮುಕ್ತಿಯನ್ನು ಹೊಂದಿದರು. ಪೊಟ್ಟಿ ಶ್ರೀರಾಮಲು ಅವರ ಉಪವಾಸೆ ಸತ್ಯಗ್ರಹದ ಫಲವಾಗಿ ಆಂಧ್ರ ಹಾಗು ತಮಿಳನಾಡು ಎಂದು ಮದ್ರಾಸ ಇಲಾಖೆ ಇಬ್ಬಾಗವಾಯಿತು. ಫಜಲ ಅಲಿ ಆಯೋಗದ ಪ್ರಕಾರ ಮುಂಬೈ ರಾಜ್ಯದ ಕನ್ನಡದ ನಾಲ್ಕು ಜಿಲ್ಲೆಗಳು ಮೈಸೂರ ಪ್ರಾಂತ್ಯದಲ್ಲಿ ವಿಲೀನಗೊಂಡು ಹೊಸ ಮೈಸೂರು ರಾಜ್ಯ ಅಸ್ತಿತ್ವಕ್ಕೆ ಬಂದಿತು. ಹೊಸ ಮೈಸೂರು ರಾಜ್ಯದ ಆರಂಭದಿಂದ ಈ ತಾಲೂಕನ್ನು ಮೂರು ವಿಧಾನ ಸಭಾ ಕ್ಷೇತ್ರಗಳನ್ನಾಗಿ ವಿಭಜಿಸಲಾಯಿತು. ೧೯೫೭ ರಲ್ಲಿ ನಡೆದ

ಲೋಕಸಭೆ ಹಾಗೂ ವಿಧಾನ ಸಭೆ ಚುನಾವಣೆಗಳಲ್ಲಿ ಒಂದು ಐತಿಹಾಸಿಕ ತೀರ್ಪು ದೊರೆಯಿತು.ವಕೀಲ ವೃತ್ತಿ ಕೈಕೊಂಡು ಆಗ ಚಿಕ್ಕೋಡಿಗೆ ಬಂದ ದತ್ತು ಅಪ್ಪಾ ಕಟ್ಟಿಯವರು ಚಿಕ್ಕೋಡಿ ಲೋಕಸಭಾ ಕ್ಷೇತ್ರದಿಂದ ರಿಪಬ್ಲಿಕ ಪಕ್ಷದ ಅಭ್ಯರ್ಥಿಯಾಗಿ ಮೀಸಲು ಅಲ್ಲದೆ ಸಾಮಾನ್ಯ ಕ್ಷೇತ್ರದಿಂದ ಆಯ್ಕೆಯಾಗಿ ಭಾರತದಲ್ಲಿ ದಾಖಲೆ ನಿರ್ಮಿಸಿದರು. ಚಿಕ್ಕೋಡಿ ಹಾಗೂ ಸದಲಗಾ ಕ್ಷೇತ್ರಗಳಿಂದ ಕಾಂಗ್ರೆಸಿನ ಶ್ರೀ ಕೋತಾವಳಿ ಹಾಗು ಶ್ರೀ ಶಿದ್ದನಗೌಡಾ ಎಸ್. ಪಾಟೀಲರು ವಿಜಯಿಯಾದರು. ಶ್ರೀ ಬಿ.ಡಿ.ನಾಯಕರವರು ಮಹಾರಾಷ್ಟ್ರ ಏಕೀಕರಣ ಸಮಿತಿಯ ಉಮೇದುವಾರರಾಗಿ ನಿಪ್ಪಾಣಿ ಕ್ಷೇತ್ರದಿಂದ ಆಯ್ಕೆಯಾದರು.

ಈ ತಾಲೂಕಿನ ಮೂರು ಮತ ಕ್ಷೇತ್ರಗಳಾದ , ಚಿಕ್ಕೋಡಿ, ಸದಲಗಾ ಹಾಗೂ ನಿಪ್ಪಾಣಿಗಳಲ್ಲಿ ರಾಜಕೀಯ ಏರು ಪೇರುಗಳು ಉಂಟಾದರೂ ವೈಯಕ್ತಿಕ ದ್ವೇಷ, ವೈಷಮ್ಯಗಳು ಬೆಳೆಯಲಿಲ್ಲ. ವೈಚಾರಿಕತೆಯ ಪ್ರಭಾವದಿಂದಾಗಿ ಜನರು ರಾಜಕೀಯ ಪ್ರಜ್ಞೆಯನ್ನು ಬೆಳೆಸಿಕೊಂಡರು. ಕ್ರಿ. ಶ. ೧೯೬೨ರ ಸಾರ್ವತ್ರಿಕ ಚುನಾವಣೆಯಲ್ಲಿ ಚಿಕ್ಕೋಡಿ ವಿಧಾನ ಸಭಾ ಕ್ಷೇತ್ರದಿಂದ ಶ್ರೀ ಎಮ್. ವ್ಹಿ. ಶೆಟ್ಟಿ ವಕೀಲರು ಆಯ್ಕೆಗೊಂಡರು. ಕ್ರಿ. ಶ. ೧೯೬೪ ರ ಹೊತ್ತಿಗೆ ಚಿಕ್ಕೋಡಿ ವಿಧಾನ ಸಭಾ ಮತ್ತು ಲೋಕಸಭಾ ಕ್ಷೇತ್ರಗಳು ಮೀಸಲು ಸ್ಥಾನಗಳಾದವು. ಕ್ರಿ. ಶ. ೧೯೬೭ ರ ಲೋಕಸಭಾ ಚುನಾವಣೆಯಲ್ಲಿ ರಿಪಬ್ಲಿಕನ್ ಪಕ್ಷದಿಂದ ಶ್ರೀ ಬಿ. ಶಂಕರಾನಂದರವರು ಆರಿಸಿ ಬಂದರು. ಕ್ರಿ. ಶ. ೧೯೬೯ ರಲ್ಲಿ ಕಾಂಗ್ರೆಸ ಪಕ್ಷವು ಇಬ್ಬಾಗವಾಗಿ ಸಂಸ್ಥಾ ಕಾಂಗ್ರೆಸ ಮತ್ತು ಇಂದಿರಾ ಕಾಂಗ್ರೆಸ್ ಎಂದು ವಿಂಗಡನೆಯಾದಾಗ ಬಿ. ಶಂಕರಾನಂದರವರು ಇಂದಿರಾ ಕಾಂಗ್ರೆಸ್ ಪಕ್ಷವನ್ನು ಸೇರಿ ಕ್ರಿ. ಶ. ೧೯೭೨ ರಲ್ಲಿ ಕಾಂಗ್ರೆಸಿನ ಪರವಾಗಿ ಸ್ಪರ್ಧಿಸಿ ಲೋಕಸಭೆಗೆ ಪುನಃ ವಿಜಯರಾದರು. ಮುಂದೆ ಬಿ. ಶಂಕರಾನಂದರವರು ಸತತ ೬ ಬಾರಿ ಚಿಕ್ಕೋಡಿ ಮತ ಕ್ಷೇತ್ರದಿಂದ ಆಯ್ಕೆಯಾಗುವುದರೊಂದಿಗೆ ದಾಖಲೆಯನ್ನೇ ಸ್ಥಾಪಿಸಿದ್ದಾರೆ. ಸಂಸತ್ತಿನಲ್ಲಿ ವಿವಿಧ ಖಾತೆಗಳ ಕ್ಯಾಬಿನೇಟ ದರ್ಜೆಯ ಮಂತ್ರಿಗಳಾಗಿ ಕಾರ್ಯ ನಿರ್ವಹಿಸಿದ ಇವರು ಈ ಭಾಗದ ಏಳ್ಗೆಗಾಗಿ ದುಡಿದವರಾಗಿದ್ದಾರೆ. ಇವರ ಮಾರ್ಗದರ್ಶನದಲ್ಲಿ ನಣದಿಯ ಶ್ರೀ ದೂಧಗಂಗಾ ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ಹಾಗೂ ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆ ಅಸ್ಥಿತ್ವಕ್ಕೆ ಬಂದವು. ರಾಜ್ಯ ಮಟ್ಟದಲ್ಲಿ ಹೊಸ ಭರವಸೆಯನ್ನು ಮೂಡಿಸುವುದರೊಂದಿಗೆ ಈ ಭಾಗದ ರಾಜಕೀಯ ಕಾರ್ಯ ಕರ್ತರನ್ನು ಬೆಳೆಸಿದರು.

ನಂತರದ ದಿನಮಾನಗಳಲ್ಲಿ ರಾಜಕೀಯದ ಪ್ರಭಾವ ಮತ್ತು ಸಮಾಜವಾದದ ಪ್ರಭಾವ ಕಡಿಮೆಯಾಗಿದ್ದರಿಂದ ಸಮಾಜವಾದಿಯ ವಿಚಾರಗಳು ಹಿಂದೆ ಬೀಳಲು ಆರಂಭಿಸಿದವು. ಕ್ರಿ. ಶ. ೧೯೯೦ ರ ದಶಕದ ನಂತರ ಚಿಕ್ಕೋಡಿ ತಾಲೂಕಿನ ಸ್ಥಳೀಯ ನಾಯಕರುಗಳು ತಮ್ಮ ಪ್ರಭಾವವನ್ನು ಹೆಚ್ಚಿಸಿಕೊಳ್ಳತೊಡಗಿದರು. ಅಂತವರಲ್ಲಿ ಚಿಕ್ಕೋಡಿ ಗ್ರಾಮದವರೇ ಆದಸಮಾಜ ಕಾರ್ಯಕರ್ತ, ಶಿಕ್ಷಣ ಪ್ರೇಮಿ, ಸಹಕಾರಿ ರಂಗದ ಭೀಷ್ಮರೆಂದೇ

ಹೆಸರಾದ ಶ್ರೀ ಶಾಂತಪ್ಪಣ್ಣಾ ಮಿರ್ಜಿಯವರು ತಮ್ಮನ್ನು ರಾಜಕೀಯ ಹಾಗೂ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡು ಮಹತ್ತರ ಸಾಧನೆ ಗೈದಿದ್ದಾರೆ. ಚಿಕ್ಕೋಡಿ ತಾಲೂಕಾ ಬೋರ್ಡಿನ ಅಧ್ಯಕ್ಷರಾಗಿ ಕ್ರಿ. ಶ. ೧೯೬೧ ರಿಂದ ೧೯೭೧ ರ ವರೆಗೆ ಸೇವೆ ಸಲ್ಲಿಸಿದ್ದಾರೆ. ಚಿಕ್ಕೋಡಿ ಪಂಚಾಯತಿಯ ಅಧ್ಯಕ್ಷರಾಗಿ ೧೫ ವರ್ಷಗಳ ಕಾಲ ಸೇವೆ ಸಲ್ಲಿಸಸಿದ್ದಾರೆ. ಅಲ್ಲದೆ ಕ್ರಿ. ಶ. ೧೯೭೮ ರಿಂದ ೧೯೮೩ ರ ವರೆಗೆ ಚಿಕ್ಕೋಡಿ ಪುರಸಭೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಕ್ರಿ. ಶ. ೧೯೮೬ ರಲ್ಲಿ ಬೆಳಗಾವಿ ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಹಾಗೂ ಇವರು ಕನ್ನಡ ಸಾಹಿತ್ಯ ಪರಿಷತ್ತಿನ ಮತ್ತು ತಾಲೂಕಾ ಕಾಂಗ್ರಸ ಸಮೀತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಇವರು ಚಿಕ್ಕೋಡಿಯಲ್ಲಿ ಶಾಂತಿ ನಿಕೇತನ ವೃದ್ಧಾಶ್ರಮವನ್ನು ಸ್ಥಾಪಿಸುವುದರೊಂದಿಗೆ ಬಡ ಬಗ್ಗರಿಗೆ, ಧಾರ್ಮಿಕ ಸಂಸ್ಥೆಗಳಿಗೆ, ಶೈಕ್ಷಣಿಕ ಸಂಸ್ಥೆಗಳಿಗೆ ಹಾಗೂ ವಿಧ್ಯಾರ್ಥಿಗಳೀಗೆ ಸಹಾಯವನ್ನು ಮಾಡುತ್ತ ಬಂದಿದ್ದಾರೆ."೩"

ಚಿಕ್ಕೋಡಿಯ ಇನ್ನೊಬ್ಬ ರಾಜಕಿಯ ಧುರೀಣರೆಂದರೆ ಶ್ರೀ ಮಲ್ಲಯ್ಯಾಸ್ವಾಮಿ ಕವಟಗಿಮಠರು ಇವರು ಮೊದಲಿನಿಂದಲು ತಮ್ಮನ್ನು ಸಕ್ರೀಯ ರಾಜಕೀಯ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡವರು. ಚಿಕ್ಕೋಡಿ ತಾಲೂಕಿನ ರೈತರು ಬೇರೆ ಪ್ರದೇಶಕ್ಕೆ ಹೋಗುವುದನ್ನು ತಪ್ಪಿಸಲು ತಮ್ಮಲ್ಲಿಯೇ ಒಂದು ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸುವ ಯೋಚನೆಯನ್ನು ಮಾಡಿದರು. ಅಲ್ಲದೇ ಚಿಕ್ಕೋಡಿ ತಾಲೂಕಿನ ನಣದಿ ಸರಹದ್ದಿಯಲ್ಲಿ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸುವುದರೊಂದಿಗೆ ೧೯೭೮ ರಲ್ಲಿ ಶ್ರೀ ದೂಧಗಂಗಾ ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಚಿಕ್ಕೋಡಿ ಇದರ ರಜಿಸ್ಟ್ರೇಶನ ಮಾಡಿದರು. ಇದರ ಪ್ರಾರಂಭಿಕ ಚೇರಮನ್ ರಾಗಿ ಶ್ರೀ ಚಿದಾನಂದ ಕೋರೆಯವರು ಆಯ್ಕೆಯಾದರು ಮತ್ತು ಶ್ರೀ ಮಲ್ಲಯ್ಯಾಸ್ವಾಮಿ ಕವಟಗಿಮಠ ಇವರು ಉಪಾಧ್ಯಕ್ಷರಾಗಿ ಸರ್ವಾನುಮತದಿಂದ ಆಯ್ಕೆಯಾದರು"೪". ಈ ಮಹನೀಯರು ಈ ಒಂದು ಕಾರ್ಖಾನೆ ಹೆಮ್ಮರವಾಗಿ ಬೆಳೆಯುವಲ್ಲಿ ಕಾರಣೀಕರ್ತರಾದರು. ಕ್ರಿ. ಶ. ೧೯೮೦ ರಲ್ಲಿ ನಡೆದ ಬೆಳಗಾವಿ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕಿನ ಚುನಾವಣೆಯಲ್ಲಿ ಅಲ್ಪ ಮತದಿಂದ ಆಯ್ಕೆಯಾದ ಇವರು ೧೯೮೧ರ ವರೆಗೆ ಆ ಬ್ಯಾಂಕಿನ ನಿರ್ದೇಶಕರಾಗಿ ಮುಂದು ವರೆದರು. ಮುಂದೆ ೧೯೯೬ ರಲ್ಲಿ ಶ್ರೀ ಮಲ್ಲಯ್ಯಾ ಸ್ವಾಮಿ ಕವಟಗಿಮಠರವರ ಮಗನಾದ ಶ್ರೀ ಮಹಾಂತೇಶ ಕವಟಗಿಮಠ ಇವರು ಬೆಳಗಾವಿ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕಿನ ನಿರ್ದೇಶಕರಾಗಿ ಆಯ್ಕೆಯಾದರು. ಇವರು ಬೆಳಗಾವಿ ಜಿಲ್ಲೆಯ ಸಾಮಾಜಿಕ, ರಾಜಕೀಯ ಹಾಗೂ ಶೈಕ್ಷಣಿಕ ರಂಗದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದು ಭರವಸೆಯ ಯುವ ನಾಯಕರಾಗಿ ಬೆಳೆಯತೊಡಗಿದ್ದಾರೆ.

ಕ್ರಿ. ಶ. ೧೯೯೦ರ ದಶಕದ ನಂತರ ಅಂಕಲಿಯ ಶ್ರೀ ಪ್ರಭಾಕರ ಬಸವಪ್ರಭು ಕೋರೆ ಕಾಂಗ್ರಸಿನ ತರುಣ ಕಾರ್ಯಕರ್ತರಾಗಿ ಹೊರಹೊಮ್ಮಿದರು. ಸಾಮಾಜಿಕ

ರಾಜಕೀಯ ಹಾಗೂ ಸಹಕಾರಿ ರಂಗಗಳಲ್ಲಿ ತಮ್ಮ ರಾಜಕೀಯ ಮುತ್ಸದ್ದಿ ತನದಿಂದ ಅನನ್ಯವಾದುದನ್ನು ಸಾಧಿಸಿದರು. ಭಾರತದ ಪ್ರಧಾನಿಯಾದ ರಾಜೀವ ಗಾಂಧಿಯವರೊಂದಿಗೆ ನಿಕಟ ಸಂಪರ್ಕವನ್ನು ಹೊಂದಿದ ಡಾ. ಪ್ರಭಾಕರ ಕೋರೆಯವರು ರಾಜ್ಯಸಭಾ ಸದಸ್ಯರಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಅಲ್ಲದೆ ಕರ್ನಾಟಕದ ಹೆಸರಾಂತ ಲಿಂಗಾಯತ ಶಿಕ್ಷಣ ಸಂಸ್ಥೆಯ ಕಾರ್ಯಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅಲ್ಲದೆ ಈ ತಾಲೂಕವು ಪ್ರಸ್ತುತ ಕ್ರಿ. ಶ. ೨೦೦೮ ರಲ್ಲಿ ಜರುಗಿದ ಮತ್ತೆ ಎರಡು ವಿಧಾನ ಸಭ ಕ್ಷೇತ್ರಗಳಾಗಿ ಪರಿವರ್ತಿತವಾಗಿದ್ದು ನಿಪ್ಪಾಣಿ ಕ್ಷೇತ್ರದಿಂದ ಶ್ರೀ. ಕಾಕಾಸಾಹೇಬ ಪಾಟೀಲ, ಚಿಕ್ಕೋಡಿ–ಸದಲಗಾ ಕ್ಷೇತ್ರದಿಂದ ಆರೀ ಪ್ರಕಾಶ ಬಾಬಣ್ಣಾ ಹುಕ್ಕೇರಿ ಇವರು ಆಯ್ಕೆಯಾಗಿ ತಾಲೂಕನ್ನು ರಾಷ್ಟ್ರ ಮಟ್ಟದಲ್ಲಿ ಗುರ್ತಿಸುವ ನಿಟ್ಟಿನೆಡೆಗೆ ಕೊಂಡೊಯ್ಯುತ್ತಿದ್ದಾರೆ.

ಈ ರೀತಿಯಾಗಿ ಚಿಕ್ಕೋಡಿ ತಾಲೂಕವು ಆದಿ ಕಾಲದ ಚರಿತ್ರೆಯ, ರಾಜಕೀಯ ದಿಂದ ಹಿಡಿದು ಇಂದಿನ ತಲೆಮಾರಿನ ರಾಜಕೀಯದ ವರೆಗೂ ಮುಂದುವರೆದು ಕೊಂಡು ಬಂದಿದೆಯಲ್ಲದೆ ಚಿಕ್ಕೋಡಿ ತಾಲೂಕು ಕಲ್ಯಾಣದ ಚಾಲೂಕ್ಯರ ಹಾಗೂ ಮರಾಠಾ ಪೇಶ್ವೆ, ಸವದತ್ತಿಯ ರಟ್ಟರ ಆಳ್ವಿಕೆಗೆ ಒಳಪಟ್ಟು ಕಾಲದಿಂದ ಕಾಲಕ್ಕೆ ತನ್ನ ರಾಜಕೀಯ ಚಿತ್ರಣವನ್ನು ಬದಲಿಸುತ್ತ ಬಂದ ಪ್ರದೇಶ ಇದು. ಇಂದು ರಾಷ್ಟ್ರ ಮಟ್ಟದ ರಾಜಕಾರಣದಲ್ಲಿ ತನ್ನನ್ನು ತಾನು ಗುರುತಿಸಿಕೊಂಡು ಜಿಲ್ಲೆಯಾಗುವ ಕನಸನ್ನು ಹೊತ್ತು ನಿಂತಿದೆ.

# ಗ್ರಂಥ ಋಣ

| ಕೃತಿ | ಸಂಪಾದಕರು | ಪ್ರಕಟನೆ ವರ್ಷ | ಪುಟ |
|---|---|---|---|
| '೧' ಕರ್ನಾಟಕದ ಶಾಸನಗಳ ಸಂಪುಟ-೪ | ಕನ್ನಡ ಅಧ್ಯಯನ ಸಂಸ್ಥೆ ಕ.ವಿ.ವಿ.ಧಾರವಾಡ | ೧೯೬೧ | |
| '೨' ಪ್ರಬಾಂಕಲಿ ಪ್ರಭಾಕರ ಕೋರೆಯವರ ಅಭಿನಂದನಾ ಗ್ರಂಥ | ಪ್ರೊ. ವ್ಹಿ. ಬಿ. ಹಿರೇಮಠ | ೧೯೯೯ | ೯೪ |
| '೩' ಸಮಾಜ ಭೂಷಣ ಶಾಂತಪ್ಪಣ್ಣಾ ಮಿರ್ಜಿ | ಡಾ. ಪಿ. ಜಿ. ಕೆಂಪಣ್ಣವರ | ೧೯೯೪ | ೧೯ |
| '೪' ಎಮ್. ಕೆ. ಕವಟಗಿಮಠ | ಶಿರೀಷಿ ಜೋಶಿ | ೨೦೦೮ | ೬೫ |

# ಅಧ್ಯಾಯ ~ ೩

## "ಚಿಕ್ಕೋಡಿ ತಾಲೂಕಿನ ಧಾರ್ಮಿಕ ಚರಿತ್ರೆ"



# “ಚಿಕ್ಕೋಡಿ ತಾಲೂಕಿನ ಧಾರ್ಮಿಕ ಚರಿತ್ರೆ”

ಮಾನವನ ಜನ್ಮ, ಧಾರ್ಮಿಕತೆಯ ಉಗಮ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಅಂದರೆ ಧವರ್ಮವಿಲ್ಲದೇ ಮಾನವನಿಗೆ ಬೆಲೆಯಿಲ್ಲ. ಮಾನವನಿಲ್ಲದೇ ಧರ್ಮಕ್ಕೆ ಬೆಲೆಯಿಲ್ಲ. ಮಾನವನನ್ನು ಅಜ್ಞಾನದಿಂದ ಸುಜ್ಞಾನವೆಂಬ ದೀವಿಗೆಯೆಡಗೆ ಕರದೊಯ್ಯುವದೇ ಧರ್ಮ. ಗಟ್ಟಿಯಾದ ಅಡಿಪಾಯವಿಲ್ಲದ ಕಟ್ಟಡ ಧರ್ಮದ ತಳಹದಿಯಿಲ್ಲದ ಮಾನವನ ಜೀವನವು ಸಂಸ್ಕಾರವಿಲ್ಲದ ಪ್ರಾಣಿಯಂತಾಗುತ್ತದೆ. ಭಾರತ ಹಲವಾರು ಧರ್ಮಗಳ ಸಂಗಮ. ಭಾರತವನ್ನು ಆದಿ ಕಾಲದಿಂದಲೂ ಅವಲೋಕಿಸಿ ನೋಡಿದಾಗ ಇಲ್ಲಿ ಹಲವಾರು ಧರ್ಮಗಳ ಸಂಗಮ, ಸಾಮರಸ್ಯತೆ ಕಂಡು ಬರುತ್ತದೆ. ಮೂಲತಃ ಮಾನವ ಕಾಡು ಸ್ಥಿತಿಯಿಂದ ನಾಡು ಸ್ಥಿತಿಗೆ ಆಗಮಿಸುವಾಗ ಆತನಲ್ಲಿ ಯಾವದೇ ತೆರನಾದ ಜಾತಿಯ ಎಣಿಕೆಗಳಿರಲಿಲ್ಲ. ಆತನ ಸಮೂಹ ಜೀವನದ ತರುವಾಯ ಆತ ತನ್ನ ಜೀವನಕ್ಕೆ ತಕ್ಕಂತಹ ಆಚರಣೆಗಳನ್ನು ಮಾಡಲು ಆರಂಭಿಸಿದ. ಆ ಆಚರಣೆಗಳು ಕಾಲ ಕಾಲಕ್ಕೆ ಪರಿವರ್ತನೆಯಾಗುತ್ತ ತಮ್ಮದೇ ಆದ ಹೊಸ ವಿಚಾರಗಳನ್ನು ಬಿಂಬಿಸುವುದರೊಂದಿಗೆ ತಮ್ಮದೇ ಆದ ಧರ್ಮದ ಉದಯಕ್ಕೆ ಕಾರಣವಾಯಿತು. ಪ್ರತಿಯೊಂದು ಧರ್ಮವು ತನ್ನದೇ ಆದ ಸಂಸ್ಕಾರ, ವಿಧಿ, ವಿಧಾನಗಳನ್ನು ಹೊಂದಿದ್ದು ಅದು ಪ್ರದೇಶದಿಂದ ಪ್ರದೇಶಕ್ಕೆ ಅದು ವಿಭಿನ್ನವಾಗಿದೆ. ಈ ರೀತಿಯಾಗಿ ಪ್ರತಿಯೊಂದು ಸಮಾಜ ದೇವರು ತಮಗೆ ಆರಾಧನೆಗೆ ಅನುಕೂಲವಾಗುವ ತಮ್ಮಆಚರಣೆಗೆ ಸಹಾಯಕವಾಗುವ ಧರ್ಮವನ್ನು ಮತ್ತು ದೇವರುಗಳನ್ನು ಆರಾಧಿಸ ತೊಡಗಿದರು. ಅಂತಹ ಧಾರ್ಮಿಕ ವಿಚಾರಗಳಿಗೆ ಬೆಳಗಾವಿ ಜಿಲ್ಲೆಯು ಹೊರತಾದುದಲ್ಲ. ಬೆಳಗಾವಿ ಜಿಲ್ಲೆಯು ಹಲವಾರು ಧರ್ಮಗಳ ಸಂಗಮ. ಇಡೀ ಜಿಲ್ಲೆಯುದ್ದಕ್ಕೂ ಹಿಂದೂ, ಜೈನ, ಕ್ರೈಸ್ಥ, ಇಸ್ಲಾಂ ಇನ್ನೂ ಹಲವಾರು ಧರ್ಮದ ಆರಾಧಕರು, ತಮ್ಮ ಧರ್ಮದೊಂದಿಗೆ ತಮಗಿಷ್ಟವಾದ ದೇವತೆಗಳನ್ನು ನಿಗದಿತವಾದ ಸ್ಥಳದಲ್ಲಿ ಪ್ರತಿಷ್ಠಾಪಿಸಿಕೊಂಡು ಆರಾಧಿಸುತ್ತಿದ್ದಾರೆ. ಇಂತಹ ಧಾರ್ಮಿಕ ವಿಚಾರಗಳಿಗೆ ಬೆಳಗಾವಿ ಜಿಲ್ಲೆಯ ಗಡಿ ತಾಲೂಕಾದ ಚಿಕ್ಕೋಡಿಯೂ ಸಹ ಒಂದಾಗಿದೆ.

ಚಿಕ್ಕೋಡಿ ತಾಲೂಕು ಸರ್ವ ಧರ್ಮಿಯರ ಆಶ್ರಯ ತಾಣವೆನಿಸಿದ್ದು ಈ ತಾಲೂಕು ಚರಿತ್ರೆಯ ಪುಟಗಳಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿದೆ. ಇಲ್ಲಿ ಬಾಳಿ ಬದುಕುತ್ತಿರುವ ಜನರು ತಮಗಿಷ್ಟವಾದ ಧರ್ಮವನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. ಈ ತಾಲೂಕು ದೆಹಲಿ ಹಾಗೂ ವಿಜಾಪೂರ ಸುಲ್ತಾನರ ಆಡಳಿತಕ್ಕೆ ಒಳಪಟ್ಟಿದ್ದರಿಂದ ಇಸ್ಲಾಂ ಧರ್ಮಕ್ಕೆ ಅದೇ ರೀತಿ ಮರಾಠಾ ಅರಸರ ಆಧಿಪತ್ಯಕ್ಕೆ ಒಳಪಟ್ಟಿದ್ದರಿಂದ ಶಕ್ತಿ ದೇವತಾ ಆರಾಧನೆಗೆ, ಇದರೊಂದಿಗೆ ತಮ್ಮ ಪಾರಂಪರಿಕ ಹಿಂದೂ ಧರ್ಮವನ್ನು ಅನುಸರಿಕೊಂಡು ಹೋಗುವುದರೊಂದಿಗೆ, ಬ್ರಿಟೀಷರ ಆಡಳಿತ ಪ್ರಭಾವಕ್ಕೆ ಒಳಪಟ್ಟ ಚಿಕ್ಕೋಡಿ ಕ್ರಿಶ್ಚನ್ ಧರ್ಮಕ್ಕೂ ಒಳಗಾಗುವುದರೊಂದಿಗೆ ತಾಲೂಕಿನ ಕೇಂದ್ರ ಸ್ಥಳ ಹಾಗೂ ತಾಲೂಕಿನ ತುಂಬೆಲ್ಲ ಸರ್ವ ಧರ್ಮೀಯ ಧಾರ್ಮಿಕ ಸ್ಥಳಗಳನ್ನು ಹೊಂದಿದ್ದು ಅವುಗಳು ಇಂತಿವೆ.

ಚಿಕ್ಕೋಡಿ ನಗರದ ಕೇಂದ್ರ ಸ್ಥಾನದಲ್ಲಿರುವ ರಾಮಲಿಂಗ ದೇವಸ್ಥಾನಕ್ಕೂ ಮತ್ತು ನಮ್ಮ ಮಹಾ ಕಾವ್ಯಗಳಲ್ಲಿ ಇರುವ ರಾಮನಿಗೂ ಹತ್ತಿರದ ಸಂಬಂಧವಿದ್ದಂತೆ ತೋರುತ್ತದೆ. ಈ ಪುರಾತನ ಕ್ಷೇತ್ರ ರಾಮಲಿಂಗ ಗುಡಿಗೆ ಶ್ರೀರಾಮಚಂದ್ರ ಬಂದಿದ್ದನೆಂಬ ಐತಿಹ್ಯವಿದೆ ಆದ್ದರಿಂದ ಈ ದೇವಾಲಯಕ್ಕೆ ರಾಮಲಿಂಗ ಗುಡಿ ಎಂದು ಕರೆಯಲಾಗುತ್ತದೆ.

ಚಿಕ್ಕೋಡಿ ನಗರದಲ್ಲಿರುವ ಮತ್ತೊಂದು ಪುರಾತನ ದೇವಾಲಯವೆಂದರೆ ಮಹಾದೇವ ದೇವಾಲಯ ಇದು ತ್ರಿಕೂಟ ಮಾದರಿಯ ದೇವಾಲಯವಾಗಿದ್ದು ಚಿಕ್ಕೋಡಿಯ ಪುರಾತನಾ ನದಿಯಾದ ಚಿಕುತ್ರಾ ನದಿಯ ದಡದ ಮೇಲಿದೆ. ಇಲ್ಲಿ ಪುರಾತನ ಲಿಂಗಗಳನ್ನು ಸ್ಥಾಪಿಸಿದ್ದು, ಪರಶಿವನ ಮಾವನಾದ ದಕ್ಷಬ್ರಹ್ಮನು ಯಜ್ಞವನ್ನು ಮಾಡಿದ್ದನೆಂದು ಪ್ರತೀತಿ ಇದೆ. ಇಲ್ಲಿ ಭಗ್ನಗೊಂಡ ಶಿಲಾಲೇಖನಗಳನ್ನು ನಾವು ಕಾಣಬಹುದಾಗಿದೆ. ವರ್ಷದ ಶ್ರಾವಣ ಮಾಸ ಮತ್ತು ಶಿವರಾತ್ರಿ ದಿನದಂದು ಜಾತ್ರೆ ನಡೆಯುತ್ತದೆ. ನಗರದ ಹೊಸಪೇಟ ಗಲ್ಲಿಯಲ್ಲಿರುವ ಬನಶಂಕರಿ ದೇವಾಲಯ ಮತ್ತು ಹನುಮಂತ ದೇವಾಲಯಗಳು ನಯನ ಮನೋಹರವಾಗಿದ್ದು ಹನುಮಂತ ದೇವಾಲಯದಲ್ಲಿ ಸುಮಾರು ೭೦೦ - ೮೦೦ ವರ್ಷಗಳಷ್ಟು ಪುರಾತನ ಕಾಲದ ವಿಷ್ಣು ಮೂರ್ತಿಯನ್ನು ಕಾಣಬಹುದಾಗಿದೆ. ಇದೇ ಪ್ರದೇಶದಲ್ಲಿ ಚಿಕ್ಕೋಡಿಯ ಕಂದಾಯ ಸಂಗ್ರಹಣಾ ಆಧಿಕಾರಿಯಾದ ರಾಮಚಂದ್ರ ದೋಂಡು ಕುಲಕರ್ಣಿ ಇವರ ದೊಡ್ಡ ಮನೆ ಇದ್ದು ಇದನ್ನು ರೂಢಿಯಲ್ಲಿ ವಾಡೆಯೆಂದು ಕರೆಯುತ್ತಾರೆ. ಈ ವಾಡೆಯ ಪಶ್ಚಿಮ ದಿಕ್ಕಿನಲ್ಲಿ ಪ್ರಭುದೇವರ ಗುಡಿ ಇದ್ದು ಇದು ಚಿಕ್ಕೋಡಿಯ ಗ್ರಾಮ ದೇವತೆಯೂ ಹೌದು. ಇಲ್ಲಿಂದ ಸ್ವಲ್ಪ ಮುಂದೆ ಬಂದರೆ ನೂರು ವರ್ಷಗಳ ಹಿಂದೆ ಕಟ್ಟಿಸಲಾದ ದತ್ತ ಮಂದಿರವನ್ನು ನೋಡಬಹುದು.

ನಗರದ ಮುಖ್ಯ ಬೀದಿಯಲ್ಲಿರುವ ಶ್ರೀಮದ ಅಲ್ಲಮಪ್ರಭು ಧೇವರ ಪರಂಪರೆಗೆ

ಸೇರಿದ ಶ್ರೀ ಸಂಪಾದನ ಚರಮೂರ್ತಿ ಮಠವು ಸುಮಾರು ಎಂಟುನೂರು ವರ್ಷಗಳ ಇತಿಹಾಸವನ್ನು ಹೊಂದಿದ್ದು ಈ ಮಠಕ್ಕೆ ವಂಟಮೂರಿ ದೇಸಗತಿಯಿಂದ ದೇಣಿಗಿ ದೊರೆತಿದೆ. ಈ ಮಠ ಧಾರ್ಮಿಕ ಸಾಮರಸ್ಯದ ಕೇಂದ್ರ ಬಿಂದುವಾಗಿದೆ. ಅಲ್ಲದೆ ಚಿಕ್ಕೋಡಿ ಪ್ರದೇಶದ ಸಾಂಸ್ಕೃತಿಕ ಕೇಂದ್ರ ಬಿಂದೂವು ಹೌದು. ಚಿಕ್ಕೋಡಿಗೂ ಸಂಪಾದನ ಮಠಕ್ಕೂ ಕನ್ನಡಕ್ಕೂ ಇರುವ ಸಂಬಂಧ ಅವಿನಾಭಾವ. ಈ ಮಠವು ಕನ್ನಡಾಂಬೆಯ ಕಿರೀಟದಂತೆ ಹಲವಾರು ವರ್ಷಗಳಿಂದ ಶೋಭಿಸುತ್ತಲೇ ಬಂದಿದೆ. "ಕನ್ನಡವೇ ಸತ್ಯ, ಕನ್ನಡವೇ ನಿತ್ಯ" ಎಂಬ ಮಾತನ್ನು ಮನಸಾರೆ ಅಪ್ಪಿ, ಒಪ್ಪಿ ನಡೆಯುವ ಅಪ್ಪಟ ಕನ್ನಡಿಗರ ಮಠವಿದು. ಚಿಕ್ಕೋಡಿಗೆ ಮಹಾರಾಷ್ಟ್ರದ ಸಮೀಪದ ನಂಟು ಇದ್ದರೂ ಇದರಿಂದ ಕನ್ನಡ ಭಾಷೆಗೆ ಮತ್ತು ಸಂಸ್ಕೃತಿಗೆ ಈ ಮಠ ಸಲ್ಲಿಸುತಿರ್ತುವ ಸೇವೆ ಅನನ್ಯ. ಆದ್ದರಿಂದ ಚಿಕ್ಕೋಡಿಯ ಚರಿತ್ರೆಯಲ್ಲಿ ಈ ಸಂಪಾದನ ಮಠಕ್ಕೆ ವಿಶಿಷ್ಟ ಸ್ಥಾನವಿದೆ.

ಚಿಕ್ಕೋಡಿ ಶ್ರೀ ಸಂಪಾದನ ಚರಮೂರ್ತಿ ಮಠ ಕನ್ನಡ ಸಾಹಿತ್ಯ ಸಂಸ್ಕೃತಿ ಧರ್ಮ ಕಾರ್ಯಗಳೊಂದಿಗೆ ನಾಡಿನ ಭಾಂಧವ್ಯಕ್ಕಾಗಿ ಶ್ರಮಿಸುತ್ತ ಬಂದಿದೆ. ಸಮಾಜದ ಜನತೆಗೆ ಭಕ್ತಿ, ಜ್ಞಾನ, ನೀತಿ, ವೈರಾಗ್ಯಗಳ ಮಹತ್ವವನ್ನು ತಿಳಿಸಿಕೊಡುವಲ್ಲಿ ಮಠದ ಪಾತ್ರ ಅಪಾರ. ಈ ಮಠ ಕ್ರಿ. ಶ. ೧೯೪೬ ರಿಂದ ಕನ್ನಡದ ಏಳ್ಗೆಗಾಗಿ ಸರ್ವ ಮತ ಬಾಂಧವರನ್ನು ಒಳಗೊಂಡು ನಾಡಹಬ್ಬ ಆರಚರಣೆಯ ಪರಂಪರೆಯನ್ನು ಹುಟ್ಟುಹಾಕಿತು. ಈ ನಾಡ ಹಬ್ಬ ಆಚರಣೆಗೆ ನಾಡಿನ ಹೆಸರಾಂತ ರಾಜಕಾರಣಿಗಳಾದ ಶ್ರೀ ಕೆಂಗಲ್ ಹನುಮಂತಯ್ಯಾ, ಶ್ರೀ. ಎಸ್. ಆರ್. ಕಂಠಿ, ಮೊದಲಾದ ನೇತಾರರು ಆಗಮಿಸಿದ್ದಾರೆ. ಅಷ್ಟೇ ಅಲ್ಲದೆ ಸಾಹಿತ್ಯ ಲೋಕದ ದಿಗ್ಗಜರಾದ ಡಾ. ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಡಾ. ಶಿವರಾಮ ಕಾರಾಂತ, ಶ್ರೀ. ತ. ರಾ. ಸುಬ್ಬರಾವ, ಡಾ. ವಿನಾಯಕ ಕೃಷ್ಣ ಗೋಕಾಕ, ಶ್ರೀಮತಿ ಸರೋಜನಿ ಮಹಿಷಿ, ಮುಂತಾದ ಗಣ್ಯರು ಈ ಮಠದ ನಾಡಹಬ್ಬ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದಾರೆ. ಇಂದಿನ ವರೆಗೂ ಈ ಮಠವು ನಾಡಹಬ, ರಾಜ್ಯೋತ್ಸವ್ವ ಕಾರ್ಯಕ್ರಮಗಳನ್ನು ಆಚರಿಸುವ ಸಂಸ್ಕೃತಿಯನ್ನು ಮುಂದುವರೆಸಿದ್ದು ನಾಡಿನ ಕನ್ನಡ ಪರ ಚಿಂತೆಯುಳ್ಳ ಮತ್ತು ಸಾಹಿತಿಗಳಾದ, ಡಾ.ೀ ಚನವೀರ ಕಣವಿ, ಶ್ರೀ ನಾಡೋಜ ಏಣಗಿ ಬಾಳಪ್ಪಾ, ಡಾ॥ ಗುರುಲಿಂಗ ಕಾಪಸೆ, ಡಾ. ಪಾಟೀಲ ಪುಟ್ಟಪ್ಪ, ಶ್ರೀ ನಾಗತಿ ಹಳ್ಳಿ ಚಂದ್ರಶೇಖರ, ಡಾ. ಸಾ.ಶಿ.ಮುರುಳಯ್ಯಾ, ಶ್ರೀ ಜ್ಯೋತಿ ಪ್ರಕಾಶ ಮಿರ್ಜಿ, ಮುಂತಾದವರು ಇಲ್ಲಿಗೆ ಬಂದು ಕನ್ನಡದ ಕೈಂಕರ್ಯವನ್ನು ಸಲ್ಲಿಸಿದ್ದಾರೆ. ಹೀಗಾಗಿ ಕನ್ನಡದ ಸಾಹಿತ್ಯ ಹಾಗೂ ಕಲಾವಿದರ ದಂಡೇ ಚಿಕ್ಕೋಡಿಗೆ ಆಗಮಿಸಿದ್ದರಿಂದ ಕನ್ನಡ ಅಭಿಮಾನಕ್ಕೆ ಉತ್ತೇಜನ ಮತ್ತು ಕನ್ನಡ ವಾತಾವರಣ ಅನಾವರಣ ಗೊಳ್ಳಲು ಸಾಧ್ಯವಾಯಿತು. ಅಪ್ಪಟ ಕನ್ನಡದ ಅಭಿಮಾನ ಹೊಂದಿದ ಈ ಮಠದ ನೂತನ ಶ್ರೀಗಳು ಕೃ. ಶ. ೨೦೦೩ ರಲ್ಲಿ ಕನ್ನಡದ ಕಟ್ಟಾಳು ನಾಡೋಜ ಶ್ರೀ ಪಾಟೀಲ ಪುಟ್ಟಪ್ಪರವರನ್ನು

ಕರೆಯಿಸಿ ಕನ್ನಡಮ್ಮನ ಬಳಗಕ್ಕೆ ಮತ್ತಷ್ಟು ಶಕ್ತಿ ತುಂಬಿದ್ದಾರೆ. ಧಾರ್ಮಿಕ ನೆಲಗಟ್ಟಿನ ಮೇಲೆ ಸ್ಥಾಪಣೆಯಾದ ಈ ಮಠ ಕನ್ನಡದ ಕೈಂಕರ್ಯದ ಜೊತೆಗೆ ಹಲವಾರು ಶಿವಶರಣರ ಜಯಂತಿಗಳನ್ನೂಾಚರಿಸುವುದರ ಮೂಲಕ ಧಾರ್ಮಿಕ ಐಕ್ಯತೆ, ಸಾಮಾಜಿಕ ಮತ್ತು ಸಾಂಸ್ಕೃತಿಕತೆಯ ಕೇಂದ್ರ ಬಿಂದುವೆಂದೆನಿಸಿದೆ.

ಚಿಕ್ಕೋಡಿ ನಗರದ ಪುರಾತನ ನದಿಯಾದ ಚಿಕುತ್ರಾ ನದಿಯ ಪೂರ್ವಕ್ಕೆ ನಗರವು ತುಂಬಾ ಬೆಳವಣಿಗೆಯನ್ನು ಹೊಂದಿದ್ದು ಇಲ್ಲಿ ಶ್ರೀ ವೆಂಕಟೇಶ್ವರನ ಮಂದಿರ ಮತ್ತು ಶ್ರೀ ರಾಘವೇಂದ್ರ ಸ್ವಾಮಿಗಳ ಮಂದಿರ ಮತ್ತು ಶ್ರೀ ಸತ್ಯಧ್ಯಾನ ತೀರ್ಥರ ವೃಂದಾವನಗಳು ಒಂದೇ ಸೂರಿನಡಿಯಲ್ಲಿವೆ. ಇಲ್ಲಿ ಪ್ರತಿ ವರ್ಷ ನವರಾತ್ರಿ ಉತ್ಸವದ ಸಂದರ್ಭದಲ್ಲಿ ಶ್ರೀ ವೆಂಕಟೇಶ್ವರ ರಥೋತ್ಸವ ಹಾಗೂ ಶ್ರಾವಣ ಮಾಸದಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳ ಆರಾಧನೆಯನ್ನು ವಿಜೃಂಭಣೆಯಿಂದ ಆಚರಿಸಲಾಗುತ್ತಿದೆ. ವಂಟಮೂರಿ ದೇಸಗತಿ ಸಂಸ್ಥಾಪಕರೂ ಈ ಮಠಕ್ಕೆ ಅನೇಕ ದಾನ, ದತ್ತಿಗಳನ್ನು ನೀಡಿದ್ದಾರೆ. ಈ ದೇವಾಲಯದ ಪ್ರಾಂಗಣ ವಿಶಾಲವಾಗಿರುವುದರಿಂದ ಧಾರ್ಮಿಕ ಕಾರ್ಯಗಳಿಗೆ ಹೇಳಿ ಮಾಡಿಸಿದಂತಹ ಸ್ಥಳವಾಗಿದೆ.

ಚಿಕ್ಕೋಡಿ ನಗರದ ಮತ್ತೊಂದು ದೇವಾಲಯವೆಂದರೆ, ಶ್ರೀ ಕಾಳಾಮಾರುತಿ ದೇವಾಲಯ. ಈ ದೇವಾಲಯದಲ್ಲಿ ಮೂರು ವರ್ಷಕ್ಕೊಮ್ಮೆ ವಿಜ್ರಂಭಣೆಯಿಂದ ಕೂಡಿದ ಜಾತ್ರೆ ಮತ್ತು ಓಕಳಿಗಳನ್ನು ಆಚರಿಸುತ್ತಾರೆ. ಶ್ರೀ ಅಲ್ಲಮಪ್ರಭುಗಳು ಅನುಷಾನ ಗೈದ ಸ್ಥಳದಲ್ಲಿ ಇಂದು ಶ್ರೀ ಅಲ್ಲಮಪ್ರಭು ದೇವಾಲಯ ಹಾಗೂ ಸಭಾ ಮಂಟಪವನ್ನು ಕಟ್ಟಲಾಗಿದೆ. ಚಿಕ್ಕೋಡಿ ಮತ್ತು ಸಾಂಗ್ಲಿ ರಾಜ್ಯ ಹೆದ್ದಾರಿ ಬಲ ಬದಿಗೆ ಶ್ರೇಷ್ಠ ಸಂತ ಪರಟಿ ನಾಗಪ್ಪನ ದೇವಸ್ಥಾನವಿದೆ. ಈ ಪರಟಿ ನಾಗಲಿಂಗೇಶ್ವರರ ಬಗ್ಗೆ ಅನೇಕ ದಂತ ಕತೆಗಳು ಇದ್ದು ಪರಟೀ ನಾಗಪ್ಪ ತನ್ನ ದಿನ ನಿತ್ಯದ ಆಹಾರ ಮತ್ತು ಉಪಹಾರಗಳನ್ನು ಟೆಂಗಿನ ಕಾಯಿಯ ಪರಟಿಯಲ್ಲಿ ಮಾಡುತ್ತಿದ್ದನಂತೆ ಆದ್ದರಿಂದ ಈ ದೇವಾಲಯಕ್ಕೆ ಪರಟಿ ನಾಗಲಿಂಗೇಶ್ವರ ದೇವಾಲಯ ಎಂದು ಹೆಸರು ಬಂದಿದೆ ಎಂದು ಊಹಿಸಲಾಗಿದೆ. ಈ ಪರಟಿ ನಾಗಲಿಂಗೇಶ್ವರನ ಜಾತ್ರೆಯು ಪ್ರತೀ ವರ್ಷ ಶ್ರಾವಣ ಮಾಸದ ೩ನೇ ಸೋಮವಾರದಂದು ಮೂರು ದಿನಗಳ ವರೆಗೆ ಅದ್ದೂರಿಯಿಂದ ನಡೆಯುತ್ತದೆ.

ಚಿಕ್ಕೋಡಿಯ ದಕ್ಷಿಣದಲ್ಲಿ ಮೈಚಾಚಿಕೊಂಡಿರುವ ಚಂದ್ರಕೋಡಿ ಬೆಟ್ಟದಡಿ ವಿರಾಜಮಾನವಾಗಿರುವ ಸ್ವಯಂಭೂ ಶ್ರೀ ಮಹಾ ಗಣಪತಿ ದೇವಾಲಯವಿದ್ದು ಸಹಸ್ರಾರು ಭಕ್ತರ ಆಕರ್ಷಕ ತಾಣವಿದಾಗಿದೆ. ಈ ಮಹಾಗಣಪತಿಯು ಸ್ವಯಂಭೂ ಗಣಪತಿಯಾಗಿದ್ದು ದಿನಾಂಕ ೨೫-೧೦-೧೯೮೦ ರಂದು ಜಾಧವ ಎಂಬ ಬಾಲಕ ಚಂದ್ರಕೋಡಿ ಬೆಟ್ಟದಡಿಯಲ್ಲಿ ಸಂಚರಿಸುತ್ತಿರುವಾಗ ಶಿಲೆಯಾಗಿರುವ ಗಣಪತಿಯ ರೂಪವನ್ನು ಕಂಡ. ಅಲ್ಲಿಂದ ಪ್ರಾರಂಭವಾದ ಭಕ್ತರ ಆಗಮನವು ಇಂದು ಚಿಕ್ಕೋಡಿಯ ಆಸು ಪಾಸುಗಳಿಂದಲೂ

ಜನರು ಈ ದೇವಸ್ಥಾನಕ್ಕೆ ಆಗಮಿಸುತ್ತಲಿದ್ದಾರೆ. ಪ್ರತಿ ಮಾಸದ ಸಂಕಷ್ಠಿ ದಿನದಂದು ಈ ಸ್ವಯಂಭೂ ಗಣಪತಿಗೆ ನಿಪ್ಪಾಣಿ, ಸದಲಗಾ ಅಷ್ಟೇ ಅಲ್ಲದೇ ಮಹಾರಾಷ್ಟ್ರದ ಇಚಲಕರಂಜಿ, ಸಾಂಗೀ, ಮೀರಜ, ಗಡಿಂಗ್ಲಜ ಮುಂತಾದ ಪ್ರದೇಶಗಳಿಂದ ಭಕ್ತರೂ ಆಗಮಿಸುತ್ತಿದ್ದು ಈ ಎಲ್ಲ ಭಕ್ತರ ಬಲು ಪೀಯ ಆರಾಧ್ಯ ದೇವನಾಗಿದ್ದಾನೆ.[೧]

ಕೇಂದ್ರ ಸ್ಥಳವಾದ ಚಿಕ್ಕೋಡಿ ಹಿಂದೂ ಜನರ ಜೊತೆಗೆ ಇಸ್ಲಾಂ ಜನತೆಯನ್ನೂ ಸಹ ಹೊಂದಿದ್ದು ವಿಜಾಪೂರದ ಆದಿಲ್‌ಶಾಹಿಗಳ ಆಡಳಿತಕ್ಕೆ ಒಳಪಟ್ಟ ಈ ಪ್ರದೇಶ ಇಸ್ಲಾಂ ಧರ್ಮೀಯರು ನೆಲೆಸಿದ್ದರಿಂದ ಇಲ್ಲಿ ೧೩ ಮಸೀದಿಗಳಿದ್ದು ಒಟ್ಟು ೧೪ ಸ್ಥಳಗಳಲ್ಲಿ ಮೋರಂ ಸಂಧರ್ಬದಲ್ಲಿ ತಮ್ಮ ದೇವರನ್ನಿಡುತ್ತಾರೆ. ಅಷ್ಟೇ ಅಲ್ಲದೆ ಇಲ್ಲಿ ೧೩ ದರ್ಗಾಗಳಿವೆ. ಚಿಕ್ಕೋಡಿ ಮಹಾಲಿಂಗಪೂರ ರಾಜ್ಯ ಹೆದ್ದಾರಿಯ ನಡುವೆ ಇರುವ ದಸ್ತಗೀರ ಸಾಹೇಬರ ದರ್ಗಾವು ಹಿಂದೂ – ಮುಸ್ಲಿಂರ ಭಾವೈಕ್ಯದ ಸಂಕೇತವೆಂದೆನಿಸಿದೆ. ಈ ದರ್ಗಾದಲ್ಲಿ ನಡೆಯುವ ಉರುಸಿನಲ್ಲಿ ಶ್ರೀ ಕೃಷ್ಣ ಪಾರಿಜಾತ, ಗೀಗೀ ಮೇಳ, ಬಯಲಾಟ ಮತ್ತು ಕವ್ವಾಲಿ ಕಾರ್ಯಕ್ರಮಗಳು ಜರುಗುತ್ತವೆ. ಈ ಕಾರ್ಯಕ್ರಮಗಳಲ್ಲಿ ಹಿಂದೂ–ಮುಸ್ಲಿಂ ಜನತೆ ಭಕ್ತಿಯಿಂದ ದೇವರನ್ನು ಆರಾಧಿಸುತ್ತಾರೆ.

ನಗರದ ಪಶ್ಚಿಮದಲ್ಲಿ ಮಹಾವೀರನ ಅಮೃತ ಶಿಲಾಸ್ತಂಭವಿದ್ದರೆ ಪೂರ್ವದಲ್ಲಿ ಬಸವೃತ್ತವಿದೆ. ಇದರೊಂದಿಗೆ ಪಾರ್ಶ್ವನಾಥ ಮತ್ತು ಆದಿನಾಥ ಮತ್ತು ಶಾಂತಿನಾಥ ಜೈನ ಬಸದಿಗಳು ಚಿಕ್ಕೋಡಿಯ ಕೇಂದ್ರ ಸ್ಥಳ ಮತ್ತು ನಿಪ್ಪಾಣಿಗೆ ಹೋಗುವ ದಾರಿಗಳಲ್ಲಿ ಎರಡು ಬಸದಿಗಳನ್ನು ಕಾಣಬಹುದಾಗಿದೆ.

ಚಿಕ್ಕೋಡಿ ನಗರ ಹಿಂದೂ–ಮುಸ್ಲಿಂ ಸಾಮರಸ್ಯದ ಜೊತೆಗೆ ಕ್ರೈಸ್ತ ಬಂಧುಗಳನ್ನು ಹೊಂದಿದ್ದು ಆ ಧರ್ಮಿಯರೂ ಈ ನಗರದಲ್ಲಿ ವಾಸವಾಗಿದ್ದಾರೆ. ಅವರೂ ಸಹ ತಮ್ಮ ಆರಾಧ್ಯ ದೇವನಾದ ಯೇಸೂಕ್ರಿಸ್ತನ ಚರ್ಚಗಳನ್ನು ಕಟ್ಟಿಸಿದ್ದಾರೆ. ಇವರೂ ಸಹ ಹಿಂದೂ–ಮುಸ್ಲಿಂ ಧರ್ಮದವರ ಜೊತೆಗೆ ಬೆರತು ಭಾಂದವ್ಯದ ಜೀವನವನ್ನು ಸಾಗಿಸುತ್ತಿದ್ದಾರೆ. ಈ ರೀತಿಯಾಗಿ ಚಿಕ್ಕೋಡಿ ನಗರವು ಧಾರ್ಮಿಕ ಸ್ಥಳಗಳನ್ನು ಹೊಂದಿದ ವೈವಿಧ್ಯತೆಯ ತಾಣವಾಗಿದೆ.

ಚಿಕ್ಕೋಡಿ ನಗರದ ಧಾರ್ಮಿಕತೆಯನುಗುಣವಾಗಿ ತಾಲೂಕಿನ ಧಾರ್ಮಿಕ ಸ್ಥಿತಿ–ಗತಿಯು ವಿಭಿನ್ನವಾಗಿದ್ದು ಚಿಕ್ಕೋಡಿ ತಾಲೂಕು ಹಲವಾರು ಧರ್ಮಗಳ ಬೀಡು ಈ ಧರ್ಮಿಯರು ವಿವಿಧ ಪ್ರದೇಶಗಳಲ್ಲಿ ವಾಸವಾಗಿದ್ದು ತಮ್ಮ ವಾಸಸ್ಥಳಗಳಲ್ಲಿ ತಮಗೆ ಬೇಕಾದ ಆರಾಧ್ಯ ದೈವಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಆ ಆರಾಧ್ಯ ದೇವರುಗಳ ತಾಣಗಳು ಇಂದು ನಮಗೆ ಹಲವಾರು ಬಗೆಯ ಧಾರ್ಮಿಕ ಮಾಹಿತಿಗಳನ್ನು ಒದಗಿಸುವ ಆಕರಗಳಾಗಿವೆ.

ಚಿಕ್ಕೋಡಿಯಿಂದ ಬೆಳಗಾವಿಗೆ ಹೋಗುವ ರಸ್ತೆಯಲ್ಲಿ ಚಿಕ್ಕೋಡಿಯಿಂದ ನಾಲ್ಕು ಕಿ.ಮೀ. ಅಂತರದಲ್ಲಿ ನಂದಿ ಗುಡಿ ಇದ್ದು ಈ ದೇವಾಲಯವನ್ನು ಘಟ್ಟಿಗ ಬಸವಣ್ಣನ ದೇವಾಲಯ ಎಂದು ಕರೆಯುತ್ತಾರೆ. ಬಸವಣ್ಣ ಹುಲಿಯನ್ನು ಕೊಂದಿದ್ದರ ಸಂಕೇತವಾಗಿ ಇಲ್ಲಿ ಹುಲಿಯ ಮೇಲೆ ಬಸವಣ್ಣ ಸವಾರಿ ಮಾಡುತ್ತಿರುವ ಮೂರ್ತಿಯನ್ನು ಕಾಣಬಹುದಾಗಿದೆ. ಶ್ರಾವಣ ಮಾಸದ ಕೊಣೆಯ ಸೋಮವಾರದಂದು ಬೃಹತ್ ಪ್ರಮಾಣದ ಜಾತ್ರೆ ಇಲ್ಲಿ ನಡೆಯುತ್ತದೆ.ಈ ಘಟ್ಟಗಿ ಗಡಿ ಭಾಗದ ಅನೇಕ ಜೈನ ಶ್ರಾವಕರ ಮನೆ ದೇವರಾಗಿದ್ದರಿಂದ ಅವರೆಲ್ಲ ಶ್ರದ್ದೆಯಿಂದ ಈ ಜಾತ್ರೆಯಲ್ಲಿ ಭಾಗವಹಿಸುವುದು ಧರ್ಮ ಸಮನ್ವಯದ ಸೂಚಕವಾಗಿದೆ. ಈ ಘಟ್ಟಗಿ ಬಸವಣ್ಣನ ಗುಡಿಯಿಂದ ಒಂದು ಕಿ.ಮೀ. ದೂರದಲ್ಲಿ ಕರೋಶಿ ಎಂಬ ಗ್ರಾಮ ಇದ್ದು ಈ ಗಾಮದಲ್ಲಿ ಶಾನೂರ ಬಾಬಾ ಎಂಬ ಫಕೀರನ ಸಮಾಧಿ ಇದೆ ಈ ಸಮಾಧಿಗೆ ಪ್ರತಿ ಅಮವಾಸ್ಯೆ ಮತ್ತು ಹುಣ್ಣಿಮೆಗಳಂದು ಎಲ್ಲ ಧರ್ಮದ ಭಕ್ತಾದಿಗಳು ಆಗಮಿಸುತ್ತಾರೆ. ಈ ಸಮಾಧಿ ಸರ್ವ ಧರ್ಮೀಯರನ್ನು ಆಕರ್ಷಿಸುವದರೊಂದಿಗೆ ಸರ್ವ ಧರ್ಮೀಯರ ಬಾಂಧವ್ಯ ಹಾಗು ಭಕ್ತಿ ಸಾಮರಸ್ಯದ ಸಂಕೇತವಾಗಿದೆ.

ಚಿಕ್ಕೋಡಿ ಸಂಕೇಶ್ವರ ಮಾರ್ಗ ಮಧ್ಯದಲ್ಲಿ ಅಂದರೆ ಚಿಕ್ಕೋಡಿಯಿಂದ ಹತ್ತು ಕಿ.ಮಿ ಅಂತರದಲ್ಲಿ ಬಿದರೊಳ್ಳಿ ಎಂಬ ಗ್ರಾಮವಿದ್ದು ಈ ಗ್ರಾಮದಲ್ಲಿ ಸಿದ್ದೇಶ್ವರ ದೇವಸ್ಥಾನವಿದೆ. ಸೃಷ್ಟಿ ಸೌಂದರ್ಯದ ಸಹ್ಯಾದ್ರಿಯ ತಪ್ಪಲು ಪ್ರದೇಶದಲ್ಲಿ ಈ ದೇವಸ್ಥಾನವಿರುವದರಿಂದ ಇದರ ನೋಟ ರಮಣೀಯವಾಗಿದೆ. ಪ್ರತಿ ವರ್ಷ ಚೈತ್ರ ಮಾಸದಲ್ಲಿ ಈ ದೇವಾಲಯದ ಜಾತ್ರೆ ಜರುಗುತ್ತದೆ. ಸರ್ವ ಧರ್ಮದ ಭಕ್ತರು ಈ ದೇವಾಲಯಕ್ಕೆ ನಡೆದುಕೊಳ್ಳುತ್ತಾರೆ.ಇಲ್ಲಿ ಸತತವಾಗಿ ನೀರು ಚಿಮ್ಮುವ ಎರಡು ಕುಂಡಗಳಿದ್ದು ಅವು ಭಕ್ತಾದಿಗಳ ಮನವನ್ನು ನಿರಂತರವಾಗಿ ತಣಿಸುವ ಕಾರ್ಯದಲ್ಲಿ ತೊಡಗಿವೆ.

ಚಿಕ್ಕೋಡಿ ತಾಲೂಕಿನ ಚಿಂಚಣಿ ಗ್ರಾಮವು ಈ ತಾಲೂಕಿನ ಧಾರ್ಮಿಕ ಕ್ಷೇತ್ರಗಳಲ್ಲಿ ಶ್ರೇಷ್ಠ ಸ್ಥಾನವಾಗಿದ್ದು ಈ ಮಠಕ್ಕೂ ಕನ್ನಡ ನಾಡಿಗೂ ಅವಿರತ ಸಂಬಂಧವನ್ನು ಕಾಣಬಹುದು. ಚಿಂಚಣಿಯ ಪ್ರಭುದೇವ ಮಠಕ್ಕೂ ಹನ್ನೆರಡನೆಯ ಶತಮಾನದ ಶಿವಶರಣನಾದ 'ಶ್ರೀಮದ್ ಅಲ್ಲಮ ಪ್ರಭು ದೇವರಿಗೂ ಅವಿನಾಭವ ಸಂಬಂದವಿದೆ. ಹನ್ನೆರಡನೆಯ ಶತಮಾನವು ಸಮಾಜದ ವೀರಶೈವರಿಗೆ ಮಹತ್ವದ ಕಾಲವಾಗಿದೆ. ಆ ಕಾಲಾವಧಿಯಲ್ಲಿ ಅಷ್ಠಾವರಣ, ಪಂಚಾಚಾರ್ರ್, ಷಟಸ್ಥಲ ಮುಂತಾದ ಅಸಾಮಾನ್ಯ ತತ್ವಗಳು ಲಿಂಗವಂತ ಧರ್ಮದ ಪ್ರಸಾರ ಕಾಲ. ಶಿವಶರಣ-ಶಿವಶರಣೀಯರ ಉತ್ಕ್ರಾಂತಿಯ ಕಾಲ ಸಕಲರಲ್ಲಿಯೂ ಶಿವ ಕಳೆ, ಶಿವ ಭಾವ, ಶಿವ ಜ್ಞಾನ, ಶಿವ ರತಿ, ಶಿವ ದೀಕ್ಷೆ ಬೆಳೆದು ಬೆಳಕಿಗೆ ಬಂದ ಶುಭ ಕಾಲ ಈ ಕಾಲವು ಚಿರಸ್ಮರಣೀಯವಾಗಿದೆ. ಈಕಾಲದಲ್ಲಿ ಜಗ ಹಿತಾರ್ಥವಾಗಿ ಅವತಾರ ಮಾಡಿದ ಶ್ರೀ ಪ್ರಭುದೇವರು ಲಿಂಗಾಂಗ ಸಾಮಂಸ್ಯ

ಭಾವದಲ್ಲಿ ನಿಬ್ಬೆರಗಾದ ಶ್ರೀ ಅನುಮಿದೇವರಿಂದ ಲಿಂಗವನ್ನು ಪಡೆದು ಅನುಮಿದೇವರ ತನ್ನ ಗುರುವೆಂದು ಷಟಸ್ಥಲ ಜ್ಞಾನ ಚಕ್ರವರ್ತಿಯಾಗಿ ಮುಕ್ತಾಯಕ್ಕನಿಗೆ ಅಜಗಣ್ಣನ ಸಾಮರಸ್ಯ ಸಮಾಧಿಯ ಇರುವನ್ನು ಉಪದೇಶಿಸಿ, ಸೊನ್ನಲಾಪುರದ (ಸೊಲ್ಲಾಪುರ) ಶ್ರೀ ಸಿದ್ದರಾಮನಿಗೆ ಕ್ರಿಯಾ ಜ್ಞಾನಗಳ ಸಮಸ್ತ ಜ್ಞಾನವನ್ನು ಮಾಡಿಕೊಟ್ಟು ಕಲ್ಯಾಣ ಪಟ್ಟಣದಲ್ಲಿ ಗುರುಲಿಂಗ ಜಂಗಮ ಭಕ್ತಿಪರಾಯಣರಾದ ಜಗಜ್ಯೋತಿ ಶ್ರೀ ಬಸವಣ್ಣನವರು ಸ್ಥಾಪಿಸಿದ ಶಿವಾನುಭವ ಮಂಟಪದ ಅಧ್ಯಕ್ಷ ಪದವಿ ವಹಿಸಿ ಶಿವಶರಣಗಣ ತಿಂಥಣಿಗೆ ಶಿವಾನುಭವ ತತ್ವವನ್ನು ಸಾರಿ ವೀರಶೈವ ಲಿಂಗಾಯತ ಧರ್ಮದ ಉಧ್ಧಾರಕ್ಕಾಗಿ ದೇಶ ಸಂಚಾರ ಮಾಡಲು ಕಲ್ಯಾಣದಿಂದ ಹೊರಟರು.

ದಕ್ಷಿಣದಿಕ್ಕಿನಲ್ಲಿ ಕಲ್ಯಾಣ ಮದ್ಯದಲ್ಲಿ ಬೆಳಗಾವಿ, ಉತ್ತರದ ದಿಕ್ಕಿನಲ್ಲಿ ಸೊನ್ನಲಾಪುರ (ಸೊಲ್ಲಾಪುರ) ಹೀಗೆ ಈ ಮೂರು ಸ್ಥಾನಗಳನ್ನು ಧರ್ಮ ಜಾಗೃತಿ ಮಾಡುವ ಕೇಂದ್ರಗಳನ್ನಾಗಿ ಮಾಡಿದರು. ಶ್ರೀ ಪ್ರಭುದೇವರು ಅಖಂಡ ಹಿಂದುಸ್ಥಾನದ ತುಂಬ ಸಂಚರಿಸುತ್ತ ಇಪ್ಪತ್ತು ಸಾವಿರ ವೀರಶೈವ ಮಠಗಳನ್ನು ಸ್ಥಾಪಿಸಿದರು. ಆ ಮಠಗಳಿಗೆ 'ಲಿಂಗ–ತತ್ವಜ್ಞಾನ–ಸಂಪನ' ಸ್ವಾಮಿಗಳನ್ನು ಅಧಿಕಾರಿಗಳನ್ನಾಗಿ ಮಾಡಿ ಅವರಿಂದ ಧರ್ಮದ ಪ್ರಸಾರ ಕಾರ್ಯವನ್ನು ನೆರವೇರಿಸಿದರು. ಅಂತಹ ಮಠಗಳಲ್ಲಿ ತೇರದಾಳ, ಚಿಕ್ಕೋಡಿ, ಚಿಂಚಣಿ, ಹುಕ್ಕೇರಿ, ಗೋಕಾಕ, ಗೂಗಿಕೊಳ್ಳ ಮುಂತಾದ ಸ್ಥಳಗಳಿಗೆ ಸ್ವತಹ ಅಲ್ಲಮ ಪ್ರಭುಗಳೇ ಬಂದು ಲಿಂಗಾರ್ಚನೆ ಮಾಡಿಕೊಂಡರೆಂಬ ಐತಿಹ್ಯ ಹೊಂದಿರುವ ಸುಪ್ರಸಿದ್ಧ ಮಠಗಳಾಗಿವೆ. ಈ ಮಠಗಳನ್ನು ಅಲ್ಲಮ ಪ್ರಭುದೇವರ ಮಠಗಳೆಂದು ಕರೆಯಲಾಗುತ್ತದೆ.

ಚಿಕ್ಕೋಡಿ ತಾಲೂಕಿನ ಚಿಂಚಣಿಗೆ ಶ್ರೀ ಅಲ್ಲಮ ಪ್ರಭುಗಳು ದಯಮಾಡಿಸಿ ತಮ್ಮ ಕೈಯಾರೆ ಸ್ಥಾಪಿಸಿದ ಗದ್ದುಗೆ ಕಲ್ಲಿನ ಲಿಂಗವನ್ನು ಕಾಣಬಹುದಾಗಿದೆ. ಅಂತೆಯೇ ಈ ಸ್ಥಾನವು ಪರಮ ಪವಿತ್ರವಾಗಿದೆ. ಇಂತಹ ಮಹಾತ್ಮರ ಪಾದ ಧೂಳಿಯ ಚಿಂಚಣಿಯ ಶ್ರೀ ಪ್ರಭುಧೇವರ ಮಠವು ಪಾವನ ಕ್ಷೇತ್ರವೆಂದೆನಿಸಿದೆ. ಚಿಂಚಣಿ ಪ್ರಭುದೇವರ ಮಠವು ಮುಂದುವರೆದ ಈ ದಿನಮಾನಗಳಲ್ಲಿ ಉಜ್ವಲವಾದ ಪ್ರಭಾವದಿಂದ ಕಂಗೊಳಿಸುತ್ತಿದೆ. ಪ್ರಭುದೇವರಿಂದ ಸ್ಥಾಪಿತವಾದ ಇಪ್ಪತ್ತು ಸಾವಿರ ಮಠಗಳ ಪಂಕ್ತಿಯಲ್ಲಿ ಈ ಮಠವೂ ಒಂದಾಗಿದೆ. ಈ ಮಠಕ್ಕೆ ಇಲ್ಲಿಯವರೆಗೆ ಎಂಟು ಜನ ಸ್ವಾಮೀಜಿಗಳು ಆಗಿ ಹೋದದ್ದು ಪಾರಂಪರಿಕ ಚರಿತ್ರೆ ಮಾತ್ರ ತಿಳಿದು ಬರುತ್ತದೆ.[೨] ಅದಕ್ಕಿಂತ ಹಿಂದಿನ ಮಾಹಿತಿಗಳು ನಮಗೆ ಅಲಭ್ಯವಾಗಿವೆ. ಚಿಂಚಣಿಯ ಮಠ ಒಂದು ಪವಾಡ ಕ್ಷೇತ್ರವಾಗಿದ್ದು ಆ ಮಠಕ್ಕೆ ಭಕ್ತಿ ಭಾವದಿಂದ ನಡೆದುಕೊಂಡವರ ಮಾತುಗಳನ್ನು ಆಲಿಸಿದಾಗ ಹಲಾವಾರು ಜನರಿಗೆ ಒಳಿತು ಆದ ವಿಷಯಗಳನ್ನು ನಮಗೆ ಪ್ರತಿಪಾದಿಸುತ್ತಾರೆ. ಇಂತಹ ಸರ್ವ ಸಮ್ಮತವಾದ ಸಿದ್ಧ ಸಂಸ್ಥಾನಮಠ ಇಂದು ತನ್ನದೇ ಆದ ವಿಶೇಷ ನಾಡಿನ ಜಾಗೃತಿಯೊಂದಿಗೆ ನಾಡಿನ ಸಂಸ್ಕೃತಿ ಭಾಷೆಯ ಬೆಳವಣಿಗೆಗೆ ಮತ್ತು ಕನ್ನಡ ನಾಡಿನ ಕನ್ನಡ ಭಾಷೆಯ ಬೆಳವಣಿಗೆಗೆ

ಗಡಿನಾಡಿನ ಈ ಮಠದ ಇಂದಿನ ಶ್ರೀಗಳು ಕಂಕಣಬದ್ಧರಾಗಿ ನಿಂತು ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಹಲವಾರು ಕನ್ನಡ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳವುದರ ಮುಖಾಂತರ ನಾಡು ನುಡಿಗಾಗಿ ಶ್ರಮಿಸುತ್ತಿದ್ದಾರೆ. ಈ ಮಠವು "ಶ್ರೀಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳವುದರ ಮುಖಾಂತರ ನಾಡು ನುಡಿಗಾಗಿ ಶ್ರಮಿಸುತ್ತಿದ್ದಾರೆ. ಈ ಮಠವು "ಶ್ರೀ ಅಲ್ಲಮ ಪ್ರಭು ಜನ ಕಲ್ಯಾಣ ಸಂಸ್ಥೆ" ಸಿದ್ಧ ಸಂಸ್ಥಾನ ಮಠ ಚಿಂಚಣಿ ಎಂಬ ಹೆಸರಿನ ಪ್ರಕಾಶನವನ್ನು ಪ್ರಾರಂಭಿಸಿ ಈ ಪ್ರಕಾಶನದ ಅಡಿಯಲ್ಲಿ ಸುಮಾರು ಇಪ್ಪತ್ತಾರು ಕನ್ನಡ ಪುಸ್ತಕಗಳನ್ನು ಹೊರ ತಂದಿದೆ. ಹನ್ನೆರಡನೆಯ ಶತಮಾನದ ವಿಧಿ-ವಿಧಾನ ಆಚರಣೆಗಳೊಂದಿಗೆ ಇಂದು 'ಗಡಿ ನಾಡಿನ ಕನ್ನಡ ಜಾಗೃತಿ ಮಠ' ಎಂದೇ ಪ್ರಸಿದ್ಧಿಯನ್ನು ಪಡೆದುಕೊಂಡಿದೆ.

ಚಿಕ್ಕೋಡಿ ತಾಲೂಕಿನ ಇನ್ನೊಂದು ಪವಿತ್ರ ಸುಕ್ಷೇತ್ರ ಯಡೂರ ಈ ದೇವಸ್ಥಾನ ಕೃಷ್ಣಾ ನದಿ ತೀರದಲ್ಲಿ ಕಂಗೊಳಿಸುವ ಕನ್ನಡ ನಾಡಿನ ಒಂದು ಪವಿತ್ರ ಕ್ಷೇತ್ರವಾಗಿದೆ. ಈ ಯಡೂರ ಗ್ರಾಮದಲ್ಲಿ ಶೋಭಾಯಮಾನವಾಗಿರುವ ವೀರಭದ್ರ ದೇವಾಲಯ ಮತ್ತು ಕಾಡಸಿದ್ಧೇಶ್ವರ ಮಠ ಅತ್ಯಂತ ಪವಿತ್ರವಾಗಿವೆ. ಈ ಪುಣ್ಯಸ್ಥಾನವು ಇಷ್ಟಾರ್ಥಸಿದ್ಧಿ ತಾಣವು. ಭಕ್ತರ ಮನೋ ಕಾಮನೆಗಳನ್ನು ಈಡೇರಿಸುವ ಪವಿತ್ರ ಸ್ಥಳಗಳಾಗಿವೆ. ಇಲ್ಲಿಯ ವೀರಭದ್ರ ದೇವಾಲಯ ಪ್ರಾಚೀನ ಕಾಲದ ನಯನ ಮನೋಹರವಾದ ಕಟ್ಟಡವನ್ನು ಹೊಂದಿ ನಿಸರ್ಗ ರಮಣೀಯವಾಗಿ ಕಂಗೊಳಿಸುತ್ತದೆ. ಈ ದೇವಸ್ಥಾನದ ಉತ್ತರ ದಿಕ್ಕಿನಲ್ಲಿ ಕಾಡಸಿದ್ಧೇಶ್ವರ ಮಠ ಇದ್ದು ಇದು ಪವಿತ್ರ ಪುಣ್ಯಸ್ಥಾನವಾಗಿದೆ. ಪುರಾಣೇತರ ಇತಿಹಾಸದಿಂದಲೂ ಪ್ರಸಿದ್ಧಿಯನ್ನು ಹೊಂದಿರುವ ಈ ಸ್ಥಳ ಮಹಿಮೆಯನ್ನು ಬಿಂಬಿಸುತ್ತಾ ಬಂದಿದೆ. ಶಿವನ ಮಡದಿಯಾದ ಪಾರ್ವತಿಯು ತನ್ನ್ ತಂದೆಯಾದ ದಕ್ಷಬ್ರಹ್ಮ ಶಿವನ ವಿರೋಧಕ್ಕಾಗಿ ಹಮ್ಮಿಕೊಂಡಿದ್ದ ಯಜ್ಞದಲ್ಲಿ ಭಾಗವಹಿಸಲು ಬಂದಿದ್ದಳಂತೆ. ಆದರೆ ತನ್ನ ತಂದೆಯಿಂದ ಅಪಮಾನಿತಳಾಗಿ ಆ ಅಪಮಾನ ಸಹಿಸದೆ ಅಲ್ಲಿಯ ಯಜ್ಞ ಕುಂಡದಲ್ಲಿಯೇ ತನ್ನ್ ದೇಹ ತ್ಯಾಗ ಮಾಡಿದಳು. ಆ ಘಟನೆಯಿಂದ ಕೋಪೋದ್ರಿಕ್ತನಾದ ಶಿವನು ತನ್ನ ಜಡೆಯಿಂದ ವೀರಭದ್ರನನ್ನು ಜನ್ಮ ತಾಳಿಸಿದ ಈ ವೀರಭದ್ರ ದಕ್ಷಬ್ರಹ್ಮನನ್ನು ಸಂಹರಿಸಿದನಂತೆ. ಅಂದಿನಿಂದ ಶಿವನ ಆಜ್ಞಾನುಸಾರವಾಗಿ ದುಷ್ಟ ನಿಗ್ರಹ ಶಿಷ್ಟ ಪರಿ ಪಾಲನೆಗಾಗಿ ಹಾಗೂ ಶಿವ ಭಕ್ತರನ್ನು ಅನುಗ್ರಹಿಸುವದಕ್ಕಾಗಿ ದಕ್ಷಬ್ರಹ್ಮನು ನಿರ್ಮಿಸಿದ ಯಜ್ಞಕುಂಡದಲ್ಲಿ ತಾನೇ ವಾಸವಾಗಿರುವನೆಂದು ಹೇಳಲಾಗುತ್ತದೆ."[೩] ಇದಕ್ಕೆ ಸಾಕ್ಷಿಯಬಂತೆ ಈ ದೇವಸ್ಥಾನದ ಈಶಾನ್ಯ ದಿಕ್ಕಿಗೆ ಇರುವ ಚಂದೂರಿನ 'ಶ್ರೀ ಚಂದ್ರೇಶ್ವರ ಲಿಂಗವು' ಹಾಗೂ ಪೂರ್ವ ದಿಕ್ಕಿಗೆ ಇರುವ ಹಳೆ ಯಡೂರ ದಾರಿಯಲ್ಲಿ ಕಾಣಸಿಗುವ ರುದ್ರಪಾದ ಬಸವೇಶ್ವರ (ನಂದಿ) ದೇವಸ್ಥಾನಗಳು ಸಾಕ್ಷಿಯಾಗಿವೆ.

ಯಡೂರ ಈ ಸ್ಥಳದಲ್ಲಿ ದಕ್ಷಬ್ರಹ್ಮನು ಯಜ್ಞಗೈದ ಕುಂಡವಿರುವುದು. ಆ ಸ್ಥಳದಲ್ಲಿ ವೀರಭದ್ರನುಸ ಲಿಂಗರೂಪದಲ್ಲಿ ನೆಲೆಸಿರುವುದು ಕಾಲಗರ್ಭದಲ್ಲಿ ಅಡಗಿ ಹೋಗಿತ್ತು. ಕಾಲಾಂತರದಲ್ಲಿ ಮಹಾಮಹಿಮ ಶಾಲಿಗಳು ಪವಾಡಪುರುಷರು ಆಗಿದ್ದ ಶ್ರೀ ಕಾಡಸಿದ್ಧೇಶ್ವರರು ಲೋಕ ಸಂಚಾರಿಗಳಾಗಿ ತಪೋನುಷ್ಠಾನ ಗೈಯಲು ಪ್ರಶಾಂತ, ನಿರ್ಜನ ಪ್ರದೇಶವನ್ನು ಅರಸುತ್ತಾ ನದಿ ತೀರದ ಈ ಯಡೂರ ತಾಣಕ್ಕೆ ಆಗಮಿಸಿದರು. ದಟ್ಟ ಗಿಡ ಮರಗಳಿಂದ ಅವೃತ್ತವಾದ ಈ ಪ್ರದೇಶದಲ್ಲಿ ತ್ರಿಕಾಲಜ್ಞಾನಿಗಳಾದ ಶ್ರೀ ಕಾಡಸಿದ್ದೇಶ್ವರರು ಪುಣ್ಯ ಗಂಗೆ ಕೃಷ್ಣೆಯಲ್ಲಿ ಮಿಂದು ಮೇಲೆದ್ದು ಬಂದು ನೋಡಿದಾಗ ಅವರಿಗೆ ಭೂದಿ ಮುಚ್ಚಿದ ಯಜ್ಞಕುಂಡವೊಂದು ಗೋಚರಿಸಿತು. ಆ ಭೂದಿಯನ್ನು ಸರಿಸಿ ನೋಡಿದಾಗ ಅಲ್ಲಿ ತೋಜೋಮಯಿ ಸ್ವಯಂಭು ಲಿಂಗ ಒಂದು ಕಂಡಿತು. ಇದುವೆ ಇಂದಿನ ಶ್ರೀ ವೀರಭದ್ರೇಶ್ವರ ಲಿಂಗ. ಇದರಿಂದ ರೋಮಾಂಚನಗೊಂಡ ಯತಿಗಳು ಇದೇ ಅನುಷ್ಠಾನ ಗೈಯಲು ಯೋಗ್ಯವಾದ ಸ್ಥಳವೆಂದು ತಪೋನುಷ್ಠಾನ ಗೈದು ಕೆಲ ಕಾಲ ಈ ಪ್ರದೇಶದಲಿ ನೆಲೆನಿಂತು ಈ ಸ್ಥಾನವನ್ನು ಪವಿತ್ರಗೊಳಿಸಿದರು. ನಂತರದ ದಿನಗಳಲ್ಲಿ ಈ ಕ್ಷೇತ್ರ ಪವಿತ್ರವಾಯಿತಲ್ಲದೇ ರಾಜ್ಯ ಹೊರರಾಜ್ಯ ಭಕ್ತರನ್ನು ಆಕರ್ಷಿಸುತ್ತದೆ. ಇಲ್ಲಿ ಇರುವ ಈ ಕಾಡಸಿದ್ದೇಶ್ವರರ ಹಿರಿಗುರುಗಳು ಸಂಚಾರಕ್ಕೆ ತೆರಳುವ ಮುನ್ನ ಮರಿ ಕಾಡಸಿದ್ಧೇಶ್ವರರಿಗೆ ವಹಿಸಿಕೊಟ್ಟೇ ಹೋದರು. ಈಗಿರುವ ಮಠದ ಸ್ಥಳದಲ್ಲಿ ಈ ಮರಿ ಕಾಡಸಿದ್ಧೇಶ್ವರರು ಅನುಷ್ಠಾನಗೊಂಡರು ಆ ಮಠವು ಪವಿತ್ರ ಸ್ಥಳವಾಯಿತು ವೀರಭದ್ರ ದೇವಸ್ಥಾನದ ಉಸ್ತುವಾರಿಯನ್ನು ಈ ಕಾಡಸಿದ್ಧೇಶ್ವರ ಮಠವೇ ನೋಡಿಕೊಳ್ಳುತ್ತದೆ. ಇಂದಿಗೂ ಕಾಡಸಿದ್ಧೇಶ್ವರದ ಮಠದ ಸ್ವಾಮಿಗಳೇ ದೇವಸ್ಥಾನದ ಧರ್ಮಾಧಿಕಾರಿಗಳಾಗಿದ್ದಾರೆ. ಬಹುತೇಕ ವೀರಭದ್ರೇಶ್ವರ ದೇವಸ್ಥಾನಗಳಲ್ಲಿ ವೀರಭದ್ರ ದೇವರ ಉತ್ಸವ ಮೂರ್ತಿ ಕಂಡು ಬಂದರೆ ಯಡೂರಿನ ವೀರಭದ್ರ ದೇವಾಲಯದಲ್ಲಿ ಲಿಂಗರೂಪ ಕಂಡು ಬಂದಿರುವುದು ವಿಶೇಷ ಯಡೂರಿನ ವೀರಭದ್ರ ದೇವರ ಮತ ಕೋಮು ಸೌಹಾರ್ದತೆಯ ಸಂಕೇತವೂ ಹೌದು. ಇಲ್ಲಿ ವೀರ–ಬೀರ–ಫೀರ. ಹೀಗೆ ಮೂರು ಮತದ ಜನ ಕ್ರಮವಾಗಿ ಈ ದೇವರನ್ನು ಆರಾಧಿಸುತ್ತಾರೆ. ವೀರಭದ್ರನನ್ನು ಈರನೆಂದು ಗ್ರಾಮ ಭಾಷೆಯಲ್ಲಿ ಕರೆದರೆ ಮೂಲ ಲಿಂಗವಿರುವ ಗರ್ಭ ಗುಡಿಯ ಬಲ ಭಾಗದಲ್ಲಿ ಬೀರನ ಮೂರ್ತಿಯಿದ್ದು ದೇವಾಲಯ ಶಿಖರದ ಎಡಭಾಗದದಲ್ಲಿ ಪೀರನ ಮೂರ್ತಿ ಇದೆ ಈ ಕಾರಣಕ್ಕಾಗಿಯೇ ಅವರಾತ್ರಿಯ ಅಮವಾಸ್ಯೆಯೆಂದು ಹಾಲುಮತದವರ ಪಲ್ಲಕ್ಕಿಗಳು ಇಲ್ಲಿ ಸೇರುತ್ತವೆ. ಸರ್ವ ಧರ್ಮ ಸಮನ್ವಯತೆ, ಭಾವೈಕ್ಯತೆಯ ತಾಣವಾದ ಈ ದೇವರಿಗೆ ಎಲ್ಲ ಮತದ ಜನಾಂಗದವರು ಶ್ರದ್ಧೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ವಿಜಯ ದಶಮಿಯ ದಿನದಂದು ದೇವರಿಗೆ ವಿಶೇಷ ಪೂಜೆ ಜರುಗುತ್ತದೆ. ಈ ದೇವಾಲಯದ ಧರ್ಮಾಧಿಕಾರಿಗಳಿಗೆ ಕಾಡಸಿದ್ಧೇಶ್ವರ, ಮರಿಕಾಡಸಿದ್ಧೇಶ್ವರ ಅದೃಶ್ಯ ಕಾಡಸಿದ್ಧೇಶ್ವರ ಎಂಬ ಹೆಸರುಗಳಿಂದ ಕರೆಯುವ ಪರಂಪರೆ

ಇದೆ. ಈಗ ಈ ಮಠಕ್ಕೆ ಜಮಖಂಡಿ ತಾಲೂಕಿನ ಹಿಪ್ಪರಗಿ ಹಿರೇಮಠದ ಮೂಲದಿಂದ ಬಂದ ಷ.ಬ್ರ. ಡಾ. ಸಿದ್ಧರಾಮಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಮಠದ ಪೀಠವನ್ನು ಅಲಂಕರಿಸಿದ್ದಾರೆ. (೨೧.೪.೨೦೦೪) ಇವರು ಮಠದ ಸರ್ವಾಂಗೀಣ ಅಭಿವೃದ್ಧಿಗಾಗಿ ಶ್ರಮಿಸಸುತ್ತಿದ್ದಾರೆ. ಧರ್ಮ ಕ್ರಾಂತಿ ಧೀರ ಯೋಗಿ ನಾಡಿನೆಡೆಯಲೆಲ್ಲಾ ಧಾರ್ಮಿಕ ಸಂಸ್ಕಾರ ಹಾಗೂ ಸನ್ಮಾರ್ಗದತ್ತ ಸಮಾಜವನ್ನು ಮುನ್ನಡೆಸುವ ಅಧ್ಯಾತ್ಮಿಕ ಪ್ರವಚನವನ್ನು ನೀಡುವ ಪೂಜ್ಯರು ಅಡಿಯನ್ನು ಇಟ್ಟ ಭೂಮಿಯನ್ನೆಲ್ಲಾ ಪಾವನಗೊಳಿಸಿದ್ದಾರೆ. ಡಾ. ಸಿದ್ಧರಾಮ ಸ್ವಾಮಿಗಳು ಜನಕಲ್ಯಾಣ ಪ್ರತಿಷಾನ ಎಂಬ ಸಂಸ್ಥೆಯನ್ನು ಹುಟ್ಟುಹಾಕಿ ತನ್ಮೂಲಕ ಬಡ ಹಾಗೂ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಯೋಗ, ಉಚಿತ ಆರೋಗ್ಯ ತಪಾಸಣೆ, ವ್ಯಕ್ತಿತ್ವ ವಿಕಸನದಂತಹ ಶಿಬಿರಗಳನ್ನು ಹಮ್ಮಿಕೊಂಡು ಯುವ ಜನತೆಯನ್ನು ದುಶ್ಚಟದಿಂದ ಮುಕ್ತ ಮಾಡಲು ವ್ಯಸನ ಮುಕ್ತ ಸಮಾಜಕ್ಕಾಗಿ ಪಾದಯಾತ್ರೆಯನ್ನು ಕೈಕೊಂಡು ಜನಜಾಗ್ರತೆಯನ್ನು ಮೂಡಿಸುತ್ತಿದ್ದಾರೆ. ಪ್ರತಿ ಅಮವಾಸ್ಯೆಯ ಮುನ್ನಾದಿನದಂದು ಸುವಿಚಾರ ಚಿಂತನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮುಖಾಂತರ ನಾಡಿನ ಅನೇಕ ವಿದ್ವಾಂಸರನ್ನು , ಸಾಹಿತಿಗಳನ್ನು , ಸಂಗೀತಗಾರರನ್ನು ಕರೆಯಿಸಿ, ಸಂಸ್ಕೃತಿಯ ಬೆಳವಣಿಗೆಗೆ ಪ್ರೋತ್ಸಾಹವನ್ನು ನೀಡುತ್ತಿದ್ದಾರೆ. ಸ್ವತಹ ಸ್ವಾಮಿಗಳು ಸಾಹಿತಿಗಳು ಹಾಗೂ ಸಾಹಿತ್ಯ ಪ್ರೇಮಿಗಳಾಗಿದ್ದು 'ಷಟಸ್ಥಲ ಚಿಂತನೆ' ಎಂಬ ವೀರಶೈವ ಸಿದ್ಧಾಂತ ಕುರಿತ ಮಹತ್ವ ಪೂರ್ಣ ಕೃತಿಯನ್ನು ರಚಿಸಿದ್ದಾರೆ. ಈ ದೇವಸ್ಥಾನಕ್ಕೆ ಆಗಮಿಸುವ ಭಕ್ತಾಧಿಗಳಿಗೆ ಸಾಂಸ್ಕೃತಿಕ ದಾಸೋಹದೊಂದಿಗೆ ದಿನ ನಿತ್ಯ ಅನ್ನ ದಾಸೋಹವೂ ಸಿಗುತ್ತದೆ.

ನಿಪ್ಪಾಣಿ ಚಿಕ್ಕೋಡಿ ತಾಲೂಕಿನ ಇನ್ನೊಂದು ನಗರ. ಚಿಕ್ಕೋಡಿಯಿಂದ ಸುಮಾರು ೨೨ ಕಿ. ಮಿ. ಅಂತರದ ಮೇಲಿದೆ. ಈ ಚಿಕ್ಕೋಡಿ ತಾಲೂಕಿನ ನಿಪ್ಪಾಣಿ ಪ್ರದೇಶವೂ ಸಹ ಹಲವಾರು ಧಾರ್ಮಿಕ ಪವಿತ್ರ ಸ್ಥಳಗಳನ್ನು ಹೊಂದಿದ್ದು ನಿಪ್ಪಾಣಿಯಿಂದ ಸುಮಾರು ೧೫ ಕಿ. ಮಿ. ಅಂತರದಲ್ಲಿರುವ ಶ್ರೀ ಕ್ಷೇತ್ರ ಆಡಿ ಇಲ್ಲಿಯ ಆರಾಧ್ಯ ದೈವ ಮಲ್ಲಯ್ಯ. ಪುಣಾ – ಬೆಂಗಳೂರ ಮಹಾ ಮಾರ್ಗದ ಮೇಲೆ ಕೊಲ್ಹಾಪೂರದಿಂದ ಪೂರ್ವದ ಕಡೆಗಿರುವ ಸಹ್ಯಾದ್ರಿ ಪರ್ವತದಂಚಿನಲ್ಲಿರುವ ಈ ಮಲ್ಲಿಕಾರ್ಜುನ ದೇವಾಲಯ ದೇಶದ ನಾನಾ ಪ್ರದೇಶದ ಜನರನ್ನು ಸೆಳೆಯುವ ಪ್ರವಿತ್ರ ಶ್ರದ್ಧಾಸ್ಥಾನವಾಗಿದೆ. ಈ ದೇವಾಲಯ ೧೧ನೆ ಶತಮಾನದಲ್ಲಿ ಸ್ಥಾಪನೆಯಾಗಿರಬಹುದು ಎಂದು ಉಹಿಸಲಾಗಿದೆ. ಆದರೆ ನಿಖರವಾದ ಮಾಹಿತಿಗಳು ಅಲಭ್ಯವಾಗಿವೆ.

ಆಡಿ ಮಲ್ಲಯ್ಯನ ಕ್ಷೇತ್ರ ಸುಮಾರು ೨೮೦ ಅಡಿ ಎತ್ತರ ಮೇಲಿದ್ದು ಈ ದೇವಸ್ಥಾನಕ್ಕೆ ಹೋಗಲು ಸುಮಾರು ೧೦೦೦ ಕ್ಕೂ ಹೆಚ್ಚು ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಈ ಕ್ಷೇತ್ರದಲ್ಲಿ 'ಶ್ರೀ ಗಣೇಶ ಮಂದಿರ', 'ಶ್ರೀದತ್ತ ಮಂದಿರ' ಗಳು ಇವೆ. ಬೆಟ್ಟದ ಮೇಲೆ

ಹೋದಂತೆ ಪಶ್ಚಿಮ ದಿಕ್ಕಿನಲ್ಲಿರುವ ಒಂದು ದೇವಾಲಯ ಕಾಣಸಿಗುತ್ತದೆ. ಈ ದೇವಾಲಯದ ಮುಂದೆ ದೀಪಸ್ತಂಭವಿದೆ. ಸುಮಾರು ೨೫ ಅಡಿ ಎತ್ತರ ಕಮಾನಾಕಾರದ ಪ್ರವೇಶದ್ವಾರವಿದ್ದು ಈ ದೇವಾಲಯವೇ ಆಡಿ ಮಲ್ಲಯ್ಯ ಕ್ಷೇತ್ರ. ಶ್ರಾವಣ ಮಾಸದ ಸಮಯದಲ್ಲಿ ಭಕ್ತರು ದೇವಸ್ಥಾನಕ್ಕೆ ಆಗಮಿಸುತ್ತಾರೆ. ದೇವಸ್ಥಾನದಲ್ಲಿ ಪಶ್ಚಿಮ ದಿಕ್ಕಿಗೆ ಮುಖಮಾಡಿರುವ ಮಹಾದೇವ ಮತ್ತು ಸಣ್ಣ ನಂದಿಯ ಮೂರ್ತಿ ಇದೆ. ದೇವಸ್ಥಾನದ ಮಧ್ಯದಲ್ಲಿ ಕರಿ ಕಲ್ಲಿನಿಂದ ನಿರ್ಮಿಸಲಾದ ನಂದಿ ವಿಗ್ರಹವಿದೆ. ದೇವಸ್ಥಾನದೊಳಗಿನ ಗರ್ಭ ಗೃಹದಲ್ಲಿ ಸ್ವಯಂಭೂ ಲಿಂಗವಿದ್ದು ಪಕ್ಕದಲ್ಲಿ ಶ್ರೀಶೈಲ ಮಲ್ಲಿಕಾರ್ಜುನನ ಎರಡು ಅಡಿ ಎತ್ತರದ ಹಿತ್ತಾಳೆ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಮೂರ್ತಿ ಅತ್ಯಾಕರ್ಷಕ ಮತ್ತು ಸುಂದರವಾಗಿದೆ. ದೇವಾಲಯದ ಶಿಖರದ ಮೇಲೆ ದೇವಾನು ದೇವತೆಗಳ ಚಿತ್ರಣವನ್ನು ಬಿಡಿಸಲಾಗಿದೆ. ಇಲ್ಲಿಯ ದೇವರನ್ನು ಪ್ರತಿನಿತ್ಯ ಮೂರು ಬಾರಿ ಪೂಜಿಸಲಾಗುತ್ತದೆ. ಶ್ರಾವಣ ಮಾಸದ ನಾಲ್ಕನೆಯ ಸೋಮವಾರದಂದು ಈ ದೇವರ ಜಾತ್ರೆ ನಡೆಯುತ್ತದೆ. ದೇವಾಲಯದ ಹಿಂದೆ ಭ್ರಮರಾಂಭಿಕಾ ದೇವಾಲಯವಿದೆ. ಮತ್ತು ದೇವಾಲಯದ ಅಕ್ಕ ಪಕ್ಕದಲ್ಲಿ ಮಹಾದೇವನ ಸಣ್ಣ ಸಣ್ಣ ಆರು ದೇವಸ್ಥಾನಗಳಿವೆ. ಇಲ್ಲಿಯ ಮಲ್ಲಿಕಾರ್ಜುನ ದೇವಸ್ಥಾನದ ಉತ್ತರದ ಕೆಳಭಾಗದಲ್ಲಿ ವಿನಾಯಕ ದೇವಾಲಯವಿದ್ದು ಮೂರು ಅಡಿ ಎತ್ತರದ ವಿನಾಯಕನ ಸುಂದರ ಮೂರ್ತಿ ಇದೆ. ದೇವಾಲಯದಿಂದ ಕೆಳಗಿಳಿದು ಬಂದಂತೆ ಮಾರ್ಗ ಮಧ್ಯದಲ್ಲಿ ಶ್ರೀ ಪುರಾತನ ದತ್ತ ಮಂದಿರ ಇದ್ದು ಈ ದೇವಸ್ಥಾನಕ್ಕೆ ಹೋಗಲು ಕೇವಲ ಕಾಲು ದಾರಿ ಮಾತ್ರ ಇದೆ. ಈ ರೀತಿಯಾಗಿ ಶ್ರೀ ಆಡಿ ಕ್ಷೇತ್ರ ಚಿಕ್ಕೋಡಿ ತಾಲೂಕಿನ ಧಾರ್ಮಿಕತೆಯ ಮತ್ತೊಂದು ಮುಕುಟವೆನಿಸಿದೆ.

ನಿಪ್ಪಾಣಿ ಶಹರದಿಂದ ಬೆಳಗಾವಿ ಕಡೆಗೆ ಹೋಗುವ ಮಾರ್ಗದಲ್ಲಿ ಸುಮಾರು ೭ ಕಿ.ಮಿ. ಅಂತರದಲ್ಲಿ ಪಶ್ಚಿಮ ದಿಕ್ಕಿನೆಡಗೆ ಹೋದರೆ ನಮಗೆ ಸಿಗುವ ಗ್ರಾಮವೇ ಶಿಪ್ಪೂರು ಇಲ್ಲಿ ಅತೀ ಪ್ರಾಚೀನ ರಾಮಲಿಂಗ ದೇವಸ್ಥಾನವನ್ನು ನಾವು ಕಾಣಬಹುದಾಗಿದೆ. ಈ ಕ್ಷೇತ್ರಕ್ಕೆ ರಾಮಾಯಣದಲ್ಲಿಯ ಶ್ರೀ ರಾಮನು ಸೀತೆಯನ್ನು ಹುಡುಕುತ್ತಾ ಲಂಕೆಗೆ ಹೋಗುವಾಗ ಇಲ್ಲಿಗೆ ಬಂದಿದ್ದನಂತೆ. ಇಲ್ಲಿದ್ದ ಸ್ವಯಂಭೂ ಲಿಂಗಕ್ಕೆ ಆತ ಪೂಜೆಯನ್ನು ಸಲ್ಲಿಸುತ್ತಿದ್ದಾಗ ಪೂಜೆಗೆ ನೀರು ಸಿಗಲಿಲ್ಲವಂತೆ ಆಗ ತನ್ನ ಬಾಣವನ್ನು ಹೊಡೆದು ಗುಡ್ಡದಿಂದ ನೀರನ್ನು ಪಡೆದನಂತೆ. ಈಗಲೂ ಕೂಡಾ ಆ ಕುಂಡದಲ್ಲಿ ನಮಗೆ ನೀರು ಕಂಡು ಬರುತ್ತದೆ. ಮುಂದೆ ಮರಾಠಾ ದೊರೆಯಾದ ಛತ್ರಪತ ಶಿವಾಜಿಯ ಕಾಲಾವಧಿಯಲ್ಲಿ ಈ ಗ್ರಾಮ ರಾಜಾಶ್ರಯವನ್ನು ಪಡೆದು ಬೆಳಕಿಗೆ ಬಂದಿತು. ಇಲ್ಲಿ ಶ್ರಾವಣ ಮಾಸದಲ್ಲಿ ನಿತ್ಯ ಅಭಿಷೇಕ ಹಾಗೂ ಪೂಜೆಗಳು ಜರುಗುತ್ತವೆ. ಈ ದೇವಾಲಯದ ನಿರ್ವಹಣೆಗಾಗಿ ಮೊದಲು ಎಂಬತ್ತು ಎಕರೆ ಜಮಿನನ್ನು ವಹಿಸಿ ಕೊಡಲಾಗಿತ್ತು.

ನಿಪ್ಪಾಣಿ ನಗರ ಹಲವಾರು ದೇವಾಲಯಗಳ ಕೇಂದ್ರ ಸ್ಥಳವಾಗಿದ್ದು ನಿಪ್ಪಾಣಿ ನಗರದ ಕಾರಣೀಕರ್ತರಾದ ಸಿದ್ಧೋಜಿರಾವ ದೇಸಾಯಿಯವರು ನಗರದಲ್ಲಿ ಶ್ರೀ ದತ್ತ ಮಂದಿರವನ್ನು ಸ್ಥಾಪಿಸಿದರು. ಇದು ಎರಡು ನೂರು ವರ್ಷಗಳ ಕಾಲದ ಹಳೆಯ ದೇವಾಲಯವಾಗಿದೆ. ಈ ದೇವಾಲಯ ರಾಷ್ಟ್ರೀಯ ಏಕತೆಯ ಪ್ರತೀಕವೂ ಆಗಿದೆ. ಈ ದೇವಾಲಯದ ಅಕ್ಕ ಪಕ್ಕದಲ್ಲಿ ವಿಠ್ಠಲ ರುಕುಮಾಯಿಗಳ ಮೂರ್ತಿಗಳನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಈ ದೇವಾಲಯದ ಎಡಭಾಗದಲ್ಲಿ ಈಶ್ವರ, ಶನಿದೇವರ ಮೂರ್ತಿಗಳನ್ನು ಸ್ಥಾಪಿಸಲಾಗಿದೆ. ಪ್ರತಿ ಗುರುವಾರ ಮತ್ತು ಶನಿವಾರ ಈ ದೇವಾಲಯಕ್ಕೆ ಭಕ್ತರು ಆಗಮಿಸುತ್ತಾರೆ. ಕ್ರಿ. ಶ. ೧೯೧೧ ರಲ್ಲಿ ಈ ದತ್ತ ಮಂದಿರದ ಗರ್ಭದ ಗುಡಿಯಲ್ಲಿ ಸಂಗಮರಿ ಕಲ್ಲಿನಲ್ಲಿ ಕೆತ್ತಲಾದ ದತ್ತಿ ದಿಗಂಬರನ ಏಕಮುಖಿ ಮೂರ್ತಿಯನ್ನು ಪ್ರತಿಷ್ಠಾಪಿಸಲಾಯಿತು. ಇದು ಒಂದು ಜಾಗೃತ ಸ್ಥಳವಾಗಿದ್ದು ಜನರ ಆರಾಧನೆಯ ಕೇಂದ್ರವೂ ಆಗಿದೆ. ನಿಪ್ಪಾಣಿ ನಗರದ ಮಧ್ಯ ಭಾಗದಲ್ಲಿರುವ ಪ್ರಾಚೀನ ಮಹಾದೇವ ಮಂದಿರ ಇದು ಚಿಕ್ಕೋಡಿ ತಾಲೂಕಿನ ಮತ್ತೊಂದು ಧಾರ್ಮಿಕ ಸ್ಥಳವಾಗಿದೆ. ಇದನ್ನೂ ಸಹ ನಿಪ್ಪಾಣಿಯ ನಿರ್ಮಿತರಾವ ಸಿದ್ಧೋಜಿರಾವ ದೇಸಾಯಿಯವರು ನಿರ್ಮಿಸಿರುತ್ತಾರೆ. ಈ ಮಂದಿರದಲ್ಲಿನ ಸಭಾ ಮಂಟಪವನ್ನು ಪ್ರವೇಶ ಮಾಡಿದಾಗ ಕಲ್ಲಿನಲ್ಲಿ ಪ್ರತಿಷ್ಠಾಪಿಸಲ್ಪಟ್ಟ ಶಿವಲಿಂಗವನ್ನು ಕಾಣಬಹುದು. ಗರ್ಭ ಗುಡಿಯ ಎಡಭಾಗಕ್ಕೆ ಕರಿ ಕಲ್ಲಿನಲ್ಲಿಯ ಕಾರ್ತಿಕ ಸ್ವಾಮಿ ಮತ್ತು ಗಣಪತಿಯ ಮೂರ್ತಿಗಳಿವೆ. ಬಲಭಾಗಕ್ಕೆ ಪಾರ್ವತಿಯ ಮತ್ತು ನಾಗರಾಜ ದೇವರ ಮತ್ತು ಶ್ರೀ ಅಕ್ಕಮಹಾದೇವಿಯ ಮೂರ್ತಿಗಳಿವೆ. ಈ ಮಂದಿರಕ್ಕೆ ೪೦ ಅಡಿ ಎತ್ತರದ ಶಿಖರವಿದ್ದು ಅದರ ಮೇಲೆ ಎಲ್ಲ ದೇವ ದೇವತೆಯರ ಮೂರ್ತಿಗಳನ್ನು ಕೆತ್ತಲಾಗಿದೆ. ಮಂದಿರದ ಹಿಂಭಾಗದಲ್ಲಿ ಬ್ರಹ್ಮದೇವರ ದೇವಾಲಯವಿದೆ. ದೇವಸ್ಥಾನದ ಬಲಭಾಗಕ್ಕೆ ಮಾರುತಿ ಮಂದಿರವಿದೆ. ಈ ದೇವಾಲಯದ ನಿರ್ವಹಣೆಗಾಗಿ ೪ ಎಕರೆ ಜಮೀನು ಇದ್ದು ಕ್ರಿ. ಶ. ೧೯೭೫ ರಲ್ಲಿ ದೇವಾಲಯದ ಉಸ್ತುವಾರಿಯನ್ನು ನೋಡಿಕೊಳ್ಳಲು ಟ್ರಸ್ಟ ಕಮೀಟಿಯನ್ನು ರಚಿಸಲಾಗಿದೆ. ಹಿಂದೂ ಹಬ್ಬ ಹರಿದಿನಗಳಂದು ಇಲ್ಲಿ ಶೆಡಗರದಿಂದ ಭಕ್ತ ಸಮೂಹ ಸೇರುತ್ತದೆ. ವಿಶೇಷವಾಗಿ ಈ ದೇವಾಲಯದಲ್ಲಿ ವರುಷದ ಸಪ್ಟಂಬರ ತಿಂಗಳಲ್ಲಿ ಪಾಂಡವ ಪಂಚಮಿ ಪ್ರಯುಕ್ತ ಪಗಡಿಯಾಟದ ಸ್ಪರ್ಧೆಯನ್ನು ಹಮ್ಮಿಕೊಳ್ಳಲಾಗುತ್ತದೆ. ಈ ಸ್ಪರ್ಧೆಗೆ ಚಿಕ್ಕೋಡಿ ತಾಲೂಕಿನ ವಿವಿಧ ಭಾಗಗಳಿಂದ ೪ ರಿಂದ ೫ ಸಾವಿರ ಜನ ಸ್ಪರ್ಧಾಳುಗಳು .ಬರುತ್ತಾರೆ. ಮಹಾ ಶಿವರಾತ್ರಿಯಲ್ಲಿ ಈ ದೇವಾಲಯದ ಉತ್ಸವ ಜರುಗತ್ತದೆ. ಈ ಸಂದರ್ಭದಲ್ಲಿ ಆರು ದಿನಗಳ ಕಾಲಾವಧಿಯವರೆಗೆ ಉತ್ಸವ ಮೂರ್ತಿಯನ್ನು ನಗರದ ಬಿದಿಗಳಲ್ಲಿ ಮೆರವಣಿಗೆ ತೆಗೆಯಲಾಗುತ್ತದೆ. ಕೊನೆಗ ಫಾಲ್ಗುಣ ಶುದ್ಧ ಪ್ರತಿಪದೆಯ ದಿನ ಮಧ್ಯಾಹ್ನ ೨ ಗಂಟೆಗೆ ರಥೋತ್ಸವ ಜರುಗುತ್ತದೆ. ಈ ರಥೋತ್ಸವ ಕಾರ್ಯಕ್ರಮದಲ್ಲಿ ಎಲ್ಲಾ ಕೋಮಿನ ಜನರು ಪಾಲ್ಗೊಳ್ಳುವುದರೊಂದಿಗೆ ನಾಡಿನ ಏಕತೆ ಮತ್ತು ಸೌಹಾರ್ದತೆಯನ್ನು ತೋರ್ಪಡಿಸುತ್ತಾರೆ.

ನಿಪ್ಪಾಣಿಯಿಂದ ಸುಮಾರು ಒಂದುವರೆ ಕಿ.ಮಿ. ದೂರದಲ್ಲಿರುವ ಶ್ರೀ ವಿರುಪಾಕ್ಷ ಲಿಂಗದ ಸಮಾಧಿ ಮಠವು ಒಂದು ಸುಂದರ ತಾಣವಾಗಿದೆ. ಇಲ್ಲಿ ಒಂದು ದೇವಾಲಯವಿದ್ದು ಇದನ್ನು ಸಮಾಧಿ ಮಠ ಎಂದು ಕರೆಯಲಾಗುತ್ತದೆ. ಇಲ್ಲಿಯ ವಾತಾವರಣ ಮನಸ್ಸಿಗೆ ಅಲ್ಹಾದಕರವಾಗಿದ್ದು ಈ ಸ್ಥಳವನ್ನು ವಿರುಪಾಕ್ಷ ಲಿಂಗ ಸಮಾಧಿ ಮಠ ಎಂದು ಕರೆಯುತ್ತಾರೆ. ಇದಕ್ಕೆ ಸುಮಾರು ಒಂದು ನೂರ ಐವತ್ತು ವರ್ಷಗಳ ಹಳೆಯ ಚರಿತ್ರೆಯಿದೆ. ಈ ಪ್ರದೇಶ ಮೊದಲು ಗಿಡಗಂಡಿಗಳಿಂದ ಆವೃತವಾಗಿದ್ದು ಈ ಸ್ಥಳಕ್ಕೆ ಸಂಚರಿಸಲು ಸಾಧ್ಯವಾಗುತ್ತಿರಲಿಲ್ಲ. ಈ ಸ್ಥಳದಲ್ಲಿ ನಾಥ ಪಂಥರ ಒಬ್ಬ ಸಾಧು ಇದ್ದನೆಂದು ಪ್ರತೀತಿ ಇದೆ. ಈತನು ಪ್ರತಿ ನಿತ್ಯ ಬೆಳಗಿನ ಜಾವ ಸ್ನಾನ ಮಾಡಿ ಈ ಸ್ಥಳದಲ್ಲಿ ಪೂಜಿಸುತ್ತಿದ್ದನು. ಅಲ್ಲದೇ ಕಂದ ಮೂಲವನ್ನು ತಿಂದು ಉದರ ಪೋಷಣೆಯನ್ನು ಮಾಡಿಕೊಳ್ಳುತ್ತಿದ್ದನು. ಒಂದು ದಿನ ನಿಪ್ಪಾಣಿ ನಗರದ ನಿರ್ಮಾತನಾದ ಸಿಧ್ಧೋಜಿರಾವ ದೇಸಾಯಿಯವರುಕುದುರೆಯ ಮೇಲಿಂದ ಹೋಗುವಾಗ ಈ ಪ್ರದೇಶದಿಂದ "ಓಂ ನಮ: ಶಿವಾಯ" ಎಂಬ ಜಪ ಕೇಳಿ ಬರುತ್ತಿರುವುದನ್ನು ಆಲಿಸಿದ ದೇಸಾಯಿಯವರು ಆಶ್ಚರ್ಯ ಚಕಿತರಾಗಿ ಆ ಧ್ವನಿಯತ್ತ ತಮ್ಮ ಕುದುರೆಯನ್ನು ತಿರುಗಿಸಿ ಆ ಕಡೆಗೆ ಹೋಗಿ ನೋಡಿದಾಗ ಅಲ್ಲಿ ಒಬ್ಬ ತೇಜೋಮಯವಾದ ತಪಸ್ವಿ ಓಂಕಾರ ಜಪವನ್ನು ಮಾಡುತ್ತಿದ್ದುದನ್ನು ನೋಡಿ ದೇಸಾಯಿಯವರ ತಲೆ ತಾನಾಗಿಯೇ ಬಾಗಿ ತಪ್ಪಸ್ವಿಗೆ ನಮಸ್ಕರಿಸಿತು. ಅವರು ಪ್ರತಿ ನಿತ್ಯ ಈ ಪ್ರದೇಶಕ್ಕೆ ಬರಲು ಆರಂಭಿಸಿದರು. ಕೆಲವು ದಿನಗಳ ನಂತರ ಆ ತಪಸ್ವಿ ದೇಸಾಯಿಯವರಿಗೆ ಈರೀತಿ ಹೇಳಿದರು "ನಾನು ಜೀವಂತ ಸಮಾಧಿಯನ್ನು ತೆಗೆದುಕೊಳ್ಳುತ್ತಿದ್ದೇನೆ ನಾನು ಸಮಾಧಿ ತಗೆದುಕೊಳ್ಳುವ ಪೂರ್ವದಲ್ಲಿ ನೀನು ಬರಬೇಕು ಸಮಾಧಿ ತಗೆದುಕೊಂಡ ನಂತರ ಬಂದಲ್ಲಿ ಏನೂ ಪ್ರಯೋಜನವಿಲ್ಲ ನಾನು ಸಮಾಧಿಯಾದ ನಂತರ ನನ್ನನು ಮುಟ್ಟ ಕೂಡದು ಒಂದು ವೇಳೆ ನೀನು ನನ್ನ ಸಮಾಧಿಯನ್ನು ಮುಟ್ಟಿದರೆ ನಿನ್ನ ವಂಶ ನಾಶವಾಗುತ್ತದೆ ಎಂದು ಹೇಳಿದನು". ಇದಾದ ಎರೆಡು ದಿನಗಳ ತರುವಾಯ ದೇಸಾಯಿಯವರು ಯುಧ್ಧದ ಮೇಲೆ ಹೋಗುವ ಸಂದರ್ಭ ಬಂದಾಗ ಈ ಸನ್ಯಾಸಿ ಹೇಳಿರುವ ಮಾತು ಮರೆತರು ಈ ಸಮಯದಲ್ಲಿಯೇ ಸನ್ಯಾಸಿಯು ಸಮಾಧಿಯನ್ನು ತೆಗೆದುಕೊಂಡಿದ್ದರು. ಕೆಲವು ಸಮಯದ ನಂತರ ಇದು ರಾಜನಿಗೆ ನೆನಪಾಗಿ ಆತ ಅಲ್ಲಿಗೆ ಹೋಗಿ ನೋಡಿದಾಗ ಸಮಾಧಿಯ ಮೇಲೆ ಕಲ್ಲು ಗೋಚರಿಸಿತು ಕಲ್ಲನ್ನು ತೆರೆದು ನೋಡಿದಾಗ ವಿಭೂತಿ ಉಂಡೆಗಳಿದ್ದವು ಅದೇ ಸ್ಥಳದಲ್ಲಿ ಇಂದು ಮಂದಿರವನ್ನು ಕಟ್ಟಲಾಗಿದೆ. ಈಹೊತ್ತಿಗೂ ಸಹ ಆ ಕಾಲವಧಿಯ ಹಳೆಯ ಸ್ಥಳಗಳು ನೋಡಲು ಸಿಗುತ್ತವೆ.

ನಿಪ್ಪಾಣಿ ನಗರದ ಕೇಂದ್ರ ಸ್ಥಳದಲ್ಲಿ ಮಹಾಲಕ್ಷ್ಮೀ ದೇವಿಯ ಮಂದಿರವಿದೆ. ಇದು ನಗರದ ಜಾಗೃತ ದೇವತೆಯಾಗಿದ್ದು ಎಲ್ಲಾ ಧರ್ಮದವರು ಈ ದೇವಾಲಯಕ್ಕೆ

ಬರುತ್ತಾರೆ ನಿಪ್ಪಾಣಿ ವಿಭಾಗದ ದೇವಾಲಯಗಳ ಸರ್ವಾಂಗೀಣ ಅಭಿವೃದ್ಧಿಗೆ ಅಪಾರವಾಗಿ ಶ್ರಮಿಸಿದ ಸಿದ್ಧೋಜಿರಾವ ದೇಸಾಯಿಯವರ ಹೆಸರು ಮತ್ತು ಅವರ ಧಾರ್ಮಿಕ ಮನೋಭಾವನೆಯನ್ನು ನಾವು ತಿಳಿದುಕೊಳ್ಳಬಹುದಾಗಿದೆ.ನಿಪ್ಪಾಣಿ ನಗರ ವಿಕಾಸವಾಗುತ್ತಾ ಬಂದು ಮಹಾರಾಜರ ಕಾಲಾವಧಿಯಲ್ಲಿ ನಿರ್ಮಾಣವಾದ ಈ ದೇವಾಲಯ ಮೊದಲು ಊರಿನಿಂದ ಹೊರ ಆಚೆ ಇದ್ದರೂ ಈಗ ನಗರ ದೇವಾಲಯವನ್ನು ಸುತ್ತುವರೆದು ಬೆಳೆದು ನಿಂತಿದೆ. ಈ ದೇವಾಲಯದ ಜಾತ್ರೆ ಎಪ್ಪತ್ತು ವರ್ಷಗಳ ತರುವಾಯ ಅಂದರೆ ಕ್ರಿ.ಶ ೧೯೮೭ ರಲ್ಲಿ ಜರುಗಿತು,ಇದು ಒಂದು ಚಿಕ್ಕ ದೇವಾಲಯುವಾಗಿದ್ದು ಚತುರ್ಭುಜಾಕೃತಿಯ ಮಹಾಲಕ್ಷ್ಮೀ ಮೂರ್ತಿಯನ್ನು ದೇವಾಲಯದಲ್ಲಿ ನಾವು ಕಾಣಬಹುದು. ಇದು ಹಿಂದೂ ಮುಸ್ಲಿಂದ ಐಕ್ಯತೆಯ ಸ್ಥಳವು ಇದಾಗಿದೆ.

ಚಿಕ್ಕೋಡಿ ತಾಲೂಕಿಗೂ ಜೈನ ಧರ್ಮಕ್ಕೂ ಬಿಡಿಸಲಾರದ ನಂಟು ಇದೆ. ಜೈನ ಧರ್ಮಕ್ಕೆ ಚಿಕ್ಕೋಡಿ ತಾಲೂಕು ತನ್ನದೇ ಆದ ವಿಶೇಷ ಕೊಡುಗೆಯನ್ನು ಸಲ್ಲಿಸಿದೆ. ಜೈನ ಯತಿಗಳಾದ ಗುಣಧರನಂದಿ ಮಹಾರಾಜರು ಚಿಕ್ಕೋಡಿ ತಾಲೂಕಿನ ಶಮನೇವಾಡಿ ಗ್ರಾಮದವರು. ಭೋಜದ ಶಾಂತಿ ಸಾಗರ ಮಹಾರಾಜರು ಚಿಕ್ಕೋಡಿ ತಾಲೂಕಿನವರಾಗಿದ್ದಾರೆ. ಇಂತಹ ಪ್ರಸಿದ್ಧ ಜೈನ ಮುನಿಗಳನ್ನು ಹೊಂದಿದ ಚಿಕ್ಕೋಡಿಯು ತಾಲೂಕಿನಾದ್ಯಂತ ಜೈನ ಪುಣ್ಯ ಕ್ಷೇತ್ರಗಳನ್ನು ಹೊಂದಿದ್ದು ಜೈನ ಧರ್ಮದ ಸಾರವನ್ನು ಜಗತ್ತಿಗೆ ತೋರ್ಪಡಿಸುವಲ್ಲಿ ಈ ತಾಲೂಕಿನ ಪಾಲು ಹೆಚ್ಚಿನದಿದೆ. ಈ ತಾಲೂಕಿನ ಕೇಂದ್ರ ಸ್ಥಳದಲ್ಲಿಯೇ ಎರಡು ಜೈನ ಧರ್ಮದ ಜಿನಾಲಯಗಳನ್ನು ನೋಡಬಹುದಾಗಿದೆ. ಈ ತಾಲೂಕಿನ ಕೋಥಳಿ, ಸ್ತವನಿಧಿ, ಯಕ್ಸಂಬಿ ಮುಂತಾದ ಸ್ಥಳಗಳಲ್ಲಿ ಜೈನ ಧರ್ಮದ ಪ್ರಮುಖ ಸ್ಥಳಗಳು ನಮಗೆ ಕಂಡು ಬರುತ್ತಿದ್ದು ಅದರಲ್ಲಿ ಸ್ತವನಿಧಿ ಅತ್ಯಂತ ಪ್ರಸಿದ್ಧವಾದ ಜೈನ ಸ್ಥಳವಾಗಿದ್ದು ಇದನ್ನು ತೌಂದಿ, ತವಂದಿ, ತವದಿ, ತವನಿಧಿ, ಸ್ತವನಿಧಿ ಎಂದು ಕರೆಯುತ್ತಾರೆ. ಈ ಸ್ಥಳ ಮಹಾ ಮಹಿಮೆಯ ಗುಟ್ಟನ್ನು ಇದು ಬಿಟ್ಟುಕೊಟ್ಟಿಲ್ಲ. ಈ ಸ್ತವನಿಧಿ ನಿಪ್ಪಾಣಿ ನಗರದಿಂದ ಬೆಳಗಾವಿ ಕಡೆಗೆ ಹೋಗುವ ರಾಷ್ಟ್ರಮಾರ್ಗದಲ್ಲಿ ನಿಪ್ಪಾಣಿಯಿಂದ ದಕ್ಷಿಣಕ್ಕೆ ನಾಲ್ಕು ಕಿ.ಮಿ. ಅಂತರದಲ್ಲಿದೆ. ಇದು ಜೈನರ ಪವಿತ್ರ ತೀರ್ಥಕ್ಷೇತ್ರ ಎಂದೆನಿಸಿದೆ. ಸ್ತವನಿಧಿ ಎಂದರೆ ಗುಣಗಳಸಾರ ಎಂಬ ಅರ್ಥವನ್ನು ಸೂಚಿಸುತ್ತದೆ.[೪] ತವಂದಿ ಎಂದರೆ ತಪದಿಂದ ಪುನೀತರಾಗುವುದು ಎಂದರ್ಥವನ್ನು ಸೂಚಿಸುತ್ತದೆ. ಇಂತಹ ಅತಿಶಯ ಕ್ಷೇತ್ರ ಕ್ರಿ. ಶ. ಹನ್ನೊಂದನೆಯ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದಿರಬಹುದು ಎಂದು ಭಾವಿಸಲಾಗಿದೆ. ಜೈನರೊಂದಿಗೆ ಇನ್ನೂಳಿದ ಜನತೆಯ ಬಾಂಧವ್ಯವನ್ನು ಈ ಕ್ಷೇತ್ರ ಬೆಸೆಯುತ್ತದೆ. ಈ ಸ್ತವನಿಧಿ ಎಂತಹ ಕಲ್ಲು ಹೃದಯದ ವ್ಯಕ್ತಿಯನ್ನು ಭಾವಪರವಶನನ್ನಾಗಿ ನಾಸ್ತಿಕನನ್ನು ಆಸ್ತಿಕನನ್ನಾಗಿ ಮಾಡುತ್ತದೆ. ಈ ಕ್ಷೇತ್ರಗಳ ಮಂದಿರಗಳ ಸಮುಚ್ಚಯದ ಮಧ್ಯದಲ್ಲಿ ನವಖಂಡ ಪಾರ್ಶ್ವನಾಥ ಹಾಗೂ ಇಲ್ಲಿಂದ ಪೂರ್ವದಲ್ಲಿ

ಅರ್ಧ ಕಿ. ಮಿ. ಅಂತರದಲ್ಲಿ ಕೂಗು ಭರಮಪ್ಪನ ದೇವಾಲಯಗಳಿವೆ. ಈ ದೇವಾಲಯಕ್ಕೂ ಬಿಜಾಪೂರದ ಬಾದಶಹರಿಗೂ ಸಂಬಂಧ ಇರುವುದು ತಿಳಿದುಬರುತ್ತದೆ. ಬಿಜಾಪೂರದ ಬಾದಶಹನ ಹೆಂಡತಿ ಬೇಗಂ ಅನಾರೋಗ್ಯದಿಂದ ಬಳಲುತ್ತಿದ್ದರು. ( ಈ ಬೇಗಮಳ ಕುಲ, ಹೆಸರು ಇತ್ಯಾದಿ ಯಾವುದು ತಿಳಿದು ಬಂದಿಲ್ಲ.) ಹಕಿಮರು ಏನೆಲ್ಲಾ ಉಪಚಾರವನ್ನು ಮಾಡಿದರೂ ಅವಳು ಗುಣಮುಖಿಳಾಗಲಿಲ್ಲ. ಇದೇ ಸಮಯದಲ್ಲಿ ಇಂಡಿಯಲ್ಲಿ ದೇಸಾಯಿ ಮನೆತನದ ಪಾಯಪ್ಪ ಮತ್ತು ಜಾಯಪ್ಪರೆಂಬ ಸಹೋದರರು ವೈದ್ಯ ವೃತ್ತಿಯನ್ನು ಮಾಡುತ್ತಿದ್ದರು. ಜೈನ ವೈದ್ಯ ಶಾಸ್ತ್ರಗಳನ್ನು ಆಧರಿಸಿ ವನಸ್ಪತಿ ಔಷಧ ಸಿದ್ಧಪಡಿಸುತ್ತಿದ್ದರು. ಇವರ ಪ್ರಸಿದ್ಧಿಯನ್ನು ಕೇಳಿದ ಬಾದಶಹ ಈ ಪಾಯಪ್ಪ ಮತ್ತು ಜಾಯಪ್ಪರನ್ನು ಕರೆಯಿಸಿದ. ಅವರು ಇವಳಿಗೆ ಔಷಧಿಯನ್ನು ನೀಡಿ ಮಾಂಸಾಹಾರವನ್ನು ತ್ಯಜಿಸುವಂತೆ ಉಪದೇಶಿಸಿ ಮರಳಿ ಇಂಡಿಗೆ ಬಂದರು. ಎರಡು ದಿನಗಳ ತರುವಾಯ ರೋಗ ಕಡಿಮೆಯಾಗುತ್ತದೆ ಎಂಬ ಸುದ್ದಿಯನ್ನು ಕೇಳಿದರು ಆದರೆ ಕೆಲವು ದಿನಗಳ ತರುವಾಯ ಬೇಗಮಳಿಗೆ ಮತ್ತೇ ಕಾಯಿಲೆ ಉಲ್ಬಣಿಸಿತು. ಬಾದಶಹ ಕೋಪಿಸಿಕೊಂಡು ಈ ಇಂಡಿ ದೇಸಾಯಿಯವರ ಹತ್ತಿರ ದೂತರನ್ನು ಕಳುಹಿಸಿ ಕರೆಯಿಸಿಕೊಂಡು ಈ ಪಾಯಪ್ಪ ಮತ್ತು ಜಾಯಪ್ಪರು ಬಿಜಾಪೂರಕ್ಕೆ ಬಂದು ಬೇಗಂಳನ್ನು ವಿಚಾರಿಸಿದಾಗ ಅವಳು ಔಷಧಿಯನ್ನು ಮಾತ್ರ ತೆಗೆದುಕೊಂಡಿದ್ದಳು ಆದರೆ ಇವರು ಹೇಳಿದ ಪತ್ಯೆಯನ್ನು ಪಾಲಿಸಿರಲಿಲ್ಲ. ಮತ್ತು ರಾಣಿಯವರು ಮಾಂಸಾಹಾರವನ್ನು ಸೇವಿಸಿದ್ದು ಕಂಡುಬಂದಿತು. ರಾಣಿಗೆ ಔಷಧಿಯನ್ನು ಕೊಡಲು ಕೆಲವು ವನಸ್ಪತಿಗಳು ಬೇಕಾದಾಗ ಅವು ತಮ್ಮಲ್ಲಿಲ್ಲವಂದು ಗೊತ್ತಾಗಿ ಹಿಂದೆ ಒಮ್ಮೆ ಕೊಲ್ಹಾಪೂರಕ್ಕೆ ಹೋಗುವ ಮಾರ್ಗ ಮಧ್ಯದಲ್ಲಿ ಅವುಗಳನ್ನು ಕಂಡಿರುವುದಾಗಿ ನೆನಪಿಸಿಕೊಂಡರು. ಬಾದಶಹನ ಅನುಮತಿಯನ್ನು ಪಡೆದುಕೊಂಡು ಆ ಪ್ರದೇಶಕ್ಕೆ ಹೋಗಿ ಗಿಡ ಮೂಲಿಕೆಗಳನ್ನು ಸಂಗ್ರಹಿಸಿ ತೆಗೆದುಕೊಂಡು ಬಂದರು. ಆ ಪರ್ವತ ಆ ಪರ್ವತ ಪ್ರದೇಶವೇ ಚಿಕ್ಕೋಡಿ ತಾಲೂಕಿನ ತೌಂದಿ (ಸ್ಥವನಿಧಿ) ಇಲ್ಲಿ ಸಿಗುವ ವನಸ್ಪತಿಯನ್ನು ತೆಗೆದುಕೊಂಡು ಬೇಗಂಳಿಗೆ ಕೊಟ್ಟು ಗುಣಪಡಿಸಿದರು. ಆರೋಗ್ಯಭರಿತಳಾದ ಬೇಗಂ ಇವರನ್ನು ತಮ್ಮ ಮನೆಯ ಸದಸ್ಯರಂತೆ ನೋಡಿಕೊಳ್ಳ ತೊಡಗಿದರು. ಈ ಪ್ರದೇಶವನ್ನು ಮೆಚ್ಚಿದ ಪಾಯಪ್ಪ ಮತ್ತು ಜಯಪ್ಪಾ ಇದೇ ಪ್ರದೇಶದಲ್ಲಿ ವಾಸವಾಗಬೇಕೆಂಬ ಬಯಕೆಯನ್ನು ವ್ಯಕ್ತಪಡಿಸಿ ಇಲ್ಲಿಯೇ ಗುಡಿಸಲಗಳನ್ನು ಕಟ್ಟಿ ವಾಸಿಸತೊಡಗಿದರು. ಪಾಯಪ್ಪ ಒಬ್ಬ ಜೈನ ಶ್ರವಕ. ಮನೆ ಬಿಟ್ಟು ಇಲ್ಲಿ ಬಂದಾಗಿನಿಂದ ಜಿನ ದರ್ಶನ ಆಗಿರಲಿಲ್ಲ.ಈ ವಿಷಯವನ್ನು ಬಾದಶಹರ ಮುಂದಿಟ್ಟಾಗ ಕೂಡಲೇ ಆಜ್ಞೆಯನ್ನು ಹೊರಡಿಸಿ ಜಿನ ಮಂದಿರದ ನಿರ್ಮಾಣ ಕಾರ್ಯವನ್ನು ಆರಂಭಿಸಿ ಸುಮಾರು ತಿಂಗಳಗಲ್ಲಿ ಇವರು ವಾಸವಾಗಿದ್ದ ಗುಡಿಸಲುಗಳ ಪಕ್ಕದಲ್ಲಿ ಸುಂದರ ಜಿನ ಮಂದಿರ ನಿರ್ಮಾಣವಾಗುವುದರ ಜೊತೆಗೆ ಸುವರ್ಣದ ಕಲಶ

ಹೊಳೆಯುತೊಡಗಿತು. ಈ ಜಿನಾಲಯದಲ್ಲಿ ನವಖಂಡಿ ಪಾರ್ಶ್ವನಾಥನ ವಿಗ್ರಹವಿದೆ. ಇದು ಪಾಯಪ್ಪ ಮತ್ತು ಜಾಯಪ್ಪರವರಿಗೆ ಕೆರೆಯಲ್ಲಿ ಸ್ನಾನ ಮಾಡುವಾಗ ದೊರೆತ ವಿಗ್ರಹವಾಗಿದೆ. ಈ ಮಂದಿರದ ಎದುರಿನಲ್ಲಿ ಪ್ರಾಚೀನನ ಕಾಲದ ಮಾನಸ್ಥಂಭವಿದೆ. ಅದರಲ್ಲಿರಬೇಕಾದ ಚತುರ್ಮುಖ ಜಿನಬಿಂಬವು ನೂರಾರು ವರುಷಗಳ ಹಿಂದೆ ಇದು ಸಿಡಿಲು ಬಡಿದು ನಾಶವಾಗಿದೆ ಎಂದು ಹೇಳುತ್ತಾರೆ. ಇತ್ತೀಚೆಗೆ ಕು.ಸುಪ್ರಕಾಶಮತಿ ಮಾತಾಜಿಯವರ ನೇತೃತ್ವದಲ್ಲಿ ಈ ಕಾರ್ಯ ನೆರವೇರಿದೆ. ಜೈನ ಮಂದಿರದ ಶಿಖರದಲ್ಲಿ ಆದಿನಾಥ ತೀರ್ಥಂಕರ ಕಡ್ಗಾಸನ ಮೂರ್ತಿಯಿದೆ. ನವಖಂಡ ಪಾರ್ಶ್ವನಾಥ ಮಂದಿರದ ಬಲಬದಿಗೆ ಶಾಂತಿನಾಥ ಜಿನ ಮಂದಿರ ಇದೆ. ಕಪ್ಪು ಶಿಲೆಯಲ್ಲಿ ನಿರ್ಮಿತವಾಗಿರುವ ಶಾಂತಿನಾಥ ಜಿನ ಮಂದಿರ ಇದೆ. ಕಪ್ಪು ಶಿಲೆಯಲ್ಲಿ ನಿರ್ಮಿತವಾಗಿರುವ ಶಾಂತಿನಾಥ ಪೂರ್ವಾಭಿಮುಖವಾಗಿ ಪದ್ಮಾಸನದಲ್ಲಿ ಕುಳಿತಿದ್ದಾನೆ. ಆತನ ಅಕ್ಕ ಪಕ್ಕದಲ್ಲಿ ಛತ್ರಿ ಹಿಡಿದು ವಿಶಿಷ್ಟ ಭಂಗಿಯಲ್ಲಿ ನಿಂತಿರುವ ಶಿಲಾ ಬಾಲಕಿಯರನ್ನು ಕಾಣಬಹುದು. ಈತನ ಹಿಂದೆ ಸುಂದರವಾದ ಪ್ರಭಾವಳಿ ಕಲಾಪೂರ್ಣವಾಗಿದೆ. ಈ ಮಂದಿರದ ದಕ್ಷಿಣಕ್ಕೆ ಇರುವವನೇ ಕ್ಷೇತ್ರಪಾಲ ಭರಮಪ್ಪಾ ಈತನನ್ನು ತೌಂದಿ ಭರಮಪ್ಪಾ ಎಂದು ಕರೆಯಲಾಗುತ್ತದೆ.



ಪಾಯಪ್ಪಾ ಮತ್ತು ಜಾಯಪ್ಪಾ ಈ ಪ್ರದೇಶದಲ್ಲಿ ತಮ್ಮ ವೈದ್ಯ ವೃತ್ತಿಯನ್ನು ನಡೆಸುತ್ತಿರುವಾಗ ಉತ್ತರದ ಮೊಗಲರು ಈ ತೀರ್ಥ ಕ್ಷೇತ್ರದ ಮೇಲೆ ದಾಳಿ ಮಾಡಿದರು. ಆಗ ಕೆಚ್ಚೆದೆಯ ಕನ್ನಡಿಗರಾದ ಇವರು ಅವರೊಡನೆ ಹೋರಾಡಿ ಮೊಗಲ ಸೈನಿಕರ ನೆತ್ತರವನ್ನು ಸುರಿಸಿದರು. ರೊಚ್ಚಿಗೆದ್ದ ಮೊಗಲ ಸೈನಿಕರು ಈ ಪ್ರದೇಶವನ್ನು ಬಿಟ್ಟು ಕೊಡಬೇಕೆಂದು ಹೇಳಿದಾಗ ಲೋಕ ಕಲ್ಯಾಣದ ವೈದ್ಯ ವೃತ್ತಿಯನ್ನು ಮಾಡಲು ವಿಜಾಪುರದ ಬಾದಶಾರರು ನಮಗೆ ಇದನ್ನು ದಯಪಾಲಿಸಿದ್ದಾರೆಂದು ದಿಟ್ಟ ನುಡಿಗಳಲ್ಲಿ ಹೇಳಿದರು. ಒಟ್ಟಾರೆಯಾಗಿ ಈ ಕ್ಷೇತ್ರದಲ್ಲಿ ನವಖಂಡ ಪಾರ್ಶ್ವನಾಥ, ಬ್ರಹ್ಮದೇವರು, ಆದಿನಾಥ, ತೀಥಂಕರರನ್ನು ಒಳಗೊಂಡ ಜೈನ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದ್ದು ಜೈನರ ಒಂದು ಪವಿತ್ರವಾದ ಸ್ಥಳ ಇದಾಗಿದೆ. ಈ ಸ್ಥಳದಲ್ಲಿ ಶಿಲಾ ಲೇಖ ಒಂದು ನಮಗೆ ಕಂಡು ಬಂದಿದ್ದು ಇದು ದೇವಾಲಯದ ಮೂರ್ತಿ ಕೆತ್ತನೆಯ ಸಮಯದಲ್ಲಿ ಕೆತ್ತಿಸಿರಬಹುದು ಎಂದು ನಂಬಲಾಗಿದೆ. ಶ್ರೀ ಮೂಲಸಂಗ ದೇಶಿಯ ಘನ ಪುಸ್ತಕದ ವೀರನಂದಿ ಸಿದ್ದಾಂಥ ಚಕ್ರವರ್ತಿಗಳ ಶಿಷ್ಯ ಸೇನಾರಸನ ಅಜ್ಜಿ 'ಲಚ್ಚಮಾದೇವಿ' ಯು ಕೆತ್ತಿಸಿರುವುದಾಗಿಯೂ ಇದನ್ನು ಜಿನ್ನೊಜಿ ಎಂಬ ಶಿಲ್ಪಕಾರನು ಕೆತ್ತಿರುವನು. ಈ ವೀರನಂದಿಯವರ ಕಾಲವನ್ನು ನಿಶ್ಚಯಿಸುವುದು ಕಠಿನವೇನಲ್ಲ. ಶಕೆ ೧೦೭೬ (ಕ್ರಿ.ಶ. ೧೧೫೪) ರಲ್ಲಿ 'ಆಚಾರ್ಯಸಾರ' ಗಂಥಕ್ಕೆ ಇವರೇ ಟೀಕೆಯನ್ನು ಬರೆದಿದ್ದಾರೆ. ಆದ್ದರಿಂದ ಈ ಶಿಲಾಲೇಖ ಸುಮಾರು ೧೨ನೇ ಶತಮಾನದ ಮದ್ಯ ಕಾಲಾವಧಿಯದಿರಬೇಕೆಂದು ಖ್ಯಾತ ಸಂಶೋಧಕರಾದ

ಡಾ. ಆ. ನೆ. ಉಪಾಧ್ಯೆಯವರು ಅಭಿಪ್ರಾಯ ಪಟ್ಟಿದ್ದಾರೆ.

ಈ ಅತೀಇಶಯ ಕ್ಷೇತ್ರದ ಪ್ರಾಚೀನತೆಯನ್ನು ಗುರುತಿಸಲು ಪಂಡಿತರ ಬಳಿ ಮೂರು ತಾಮ್ರ ಪಟಗಳಿವೆ. ಈ ತಾಮ್ರ ಪಟಗಳಲ್ಲಿ ವಿಜಾಪಪೂರದ ಆದಿಲ್ ಶಹಾ ಮತ್ತು ಬಾದಶಾಹಾರ ಉಲ್ಲೇಖವಿರುವದರಿಂದ ೧೫ ರಿಂದ ೧೭ನೇ ಶತಮಾನದಲ್ಲಿ ಇಲ್ಲಿ ಮಂದಿರ ನಿರ್ಮಾನವಾಗಿರಬಹುದೆಂದು ಉಹಿಸಲಾಗಿದೆ. ಹೀಗಾಗಿ ಚಿಕ್ಕೋಡಿ ತಾಲೂಕಿನ ಸ್ಥವನಿಧಿ ಜೈನ ಕ್ಷೇತ್ರ ವಾಗಿದ್ದು ಜೈನ ಧರ್ಮದವರಿಇಗೆ ಮತ್ತು ಸಂಶೋಧಕರಿಗೆ ಮತ್ತು ಸರ್ವ ಧರ್ಮ ಆರಾಧಕರಿಗೆ ಮುದವನ್ನುಂಟು ಮಾಡುವ ತಾಣವಿದಾಗಿದೆ.

ಚಿಕ್ಕೋಡಿ ತಾಲೂಕಿನ ಇನ್ನೊಂದು ಪವಿತ್ರ ಜೈನ ಸ್ಥಳವೆಂದರೆ ಯಕ್ಸಂಬಿ, ಯಕ್ಸಂಬಿ ಗ್ರಾಮವು ಚಿಕ್ಕೋಡಿ ತಾಲೂಕಿನ ಪ್ರಾಚೀನ ಗ್ರಾಮವಾಗಿದೆ. ಈ ಗ್ರಾಮವನ್ನು ಶಾಸನಗಳಲ್ಲಿ "ಯಕ್ಕಸಂಬುಗೆ" ಎಂದು ಕರೆಯಲಾಗಿದೆ. ಯಕ್ಸಂಬಿಯು ಚಿಕ್ಕೋಡಿಯಿಂದ ೮ ಕಿ.ಮಿ. ಅಂತರದಲ್ಲಿದ್ದು, ಪುರಾತನ ಅವಶೇಷಗಳನ್ನು ಹೊತ್ತು ನಿಂತ ಒಂದು ಸುಂದರ ಗ್ರಾಮ. ಈ ಗ್ರಾಮದಲ್ಲಿಇರುವ ಪುರಾತನ ಅವಶೇಷಗಳು ಸಂದರ್ಶನ ನಿಮಿತ್ಯ ಬಂದ ಪ್ರವಾಸಿಗರನ್ನು ಎದುರುಗೊಳ್ಳುತ್ತವೆ. ಇಂತಹ ಪ್ರಾಚೀನ ಅವಶೇಷಗಳಲ್ಲಿ ಯಕ್ಸಂಬಿಯ ಜಿನ ಮಂದಿರವು ಒಂದು. ಚಿಕ್ಕೋಡಿ ತಾಲೂಕಿನ ಭವ್ಯ ಇತಿಹಾಸವನ್ನು ಎತ್ತಿ ಹೇಳುವ 'ಯಕ್ಕಸಂಬುಗೆಯ' ಶಿಲಾಶಾಸನ ಈ ಜಿನಾಲಯದಲ್ಲಿದೆ. ಪ್ರಸ್ತುತ ಜಿನಾಲಯವನ್ನು ಕ್ರಿ. ಶ. ೧೧೬೫ ರಲ್ಲಿ ಕಟ್ಟಿಸಿರಬಹುದೆಂದು ಅಂದಾಜಿಸಲಾಗಿದೆ. ಇಲ್ಲಿದ್ದ ಶಿಲಾಶಾಸನ ಈ ಮಂದಿರ ಕಟ್ಟಿಸಿದವನ ಹೆಸರು, ಕಾಲ, ಮತ್ತು ಸಂಗತಿಯನ್ನು ಸವಿಸ್ತಾರವಾಗಿ ತಿಳಿಯಪಡಿಸುತ್ತಿವೆ. ಈ ಶಿಲಾಶಾಸನವನ್ನು ಗರ್ಭಗುಡಿಯ ಎಡಗಡೆಯ ಗೋಡೆಗೆ ಆನಿಸಿ ನಿಲ್ಲಿಸಲಾಗಿದೆ. ಇದು ಆದಿನಾಥ ಸ್ವಾಮಿಯ ಬಸದಿಯಾಗಿದ್ದು ಶಾಸನದ ಪ್ರಕಾರ ನೇಮಿನಾಥ ಬಸದಿ ಇದ್ದದ್ದು ತಿಳಿದು ಬರುತ್ತದೆ. ಈ ಶಾಸನ ಆರಂಭಿಕ ಸಾಲುಗಳನ್ನು ಈ ರೀತಿಯಾಗಿ ಒಳಗೊಂಡಿದೆ. 'ಜೈನ ಶಾಸನಕ್ಕೆ ಜಯವಾಗಲಿ, ಯಾಪನೀಯ ಮುನಿಸಂಘ ಕೀರ್ತಿ ಬೆಳಗಲಿ' ಎಂಬ ಹಾರೈಕೆಯಿಂದ ಈ ಶಾಸನ ಅಂದಿನ ಕಾಲದ ರಾಜವಂಶವನ್ನು ತಿಳಿಸುತ್ತಾ ಮುನ್ನುಗ್ಗುತ್ತದೆ. ಕಲಚೂರಿ ಮನೆತನದ ಬಿಜ್ಜಳದೇವ ಚಕ್ರವರ್ತಿಗೆ ಸವದತ್ತಿಯ ರಟ್ಟರು, ಕೊಲ್ಹಾಪೂರದ ಶಿಲಾಹಾರರು ಸಾಮಂತರಾಗಿದ್ದರು. ಶಿಲಾಹಾರ ವಂಶದ ಮಾರಸಿಂಗನ ಮಗ ಗುಂಡಾರಾದಿತ್ಯ ಇವನ ಹಿರಿಯ ಮಗ ವಿನಿಯಾದದಿತ್ಯ ಯಕ್ಕಸಂಬುಗೆ ಗ್ರಾಮದಲ್ಲಿ 'ನೇಮಿನಾಥ' ಸ್ವಾಮಿ ಮಂದಿರವನ್ನು ಕಟ್ಟಿಸಿದ ಎಂದು ವರ್ಣನೆಯಿದೆ. ಅಲ್ಲದೇ ಈ ನೇಮಿನಾಥ ಬಸದಿಯ ವರ್ಣನೆಯನ್ನು ಕೇಳಿದ್ದನೆಂಬ ಮಹಾಮಂಡಳೇಶ್ವರ ಸವದತ್ತಿಯ ರಟ್ಟ ದೊರೆ ಕಾರ್ತವೀರ್ಯ ಯಕ್ಕಸುಂಬಿಗೆ ಬಂದು ಚೇತೋಹಾರಿಯಾದ ಜಿನ ಮಂದಿರವನ್ನು ನೋಡಿ ಕಾಲ ಕಾಲಕ್ಕ ಮಧುರ ವಾದ್ಯ ಬಾರಿಸುವವರಿಗೆ ಎರಡು ಸಾವಿರ ಕಂಬ ಭೂಮಿಯನ್ನು ದಾನಶಾಲೆ, ಬಣಚಿಯ ನಿವೇಶನ, ಹೂದೋಟ

ಜಾಗೆಗಳನ್ನು ದತ್ತಿಕೊಟ್ಟನು. ಅಲ್ಲದೆ ಕಲ್ಲೋಳಿ ಗ್ರಾಮದ ಕೆಲ ಭೂಮಿಯನ್ನು ದೇವಾಲಯಕ್ಕೆ ದಾನ ಮಾಡಿದನೆಂದು ಈ ಶಾಸನದಿಂದ ತಿಳಿದು ಬರುತ್ತದೆ. ಯಕ್ಕಸುಂಬಿಗೆಯಲ್ಲಿರುವ ವ್ಯಾಪಾರಿ ಸಂಘಗಳು ನೇಮಿನಾಥ ಪ್ರಭುವಿನ ಲಿಪಿ ಕಥಾರಚನೆ ಹಾಗೂ ನಂದಾದೀವಿಗೆ ತೆರಿಗೆಯನ್ನು ಕೊಡಲು ಸಹ ಕರಿಸಿದ ಬಗ್ಗೆ ಈ ಶಿಲಾಶಾಸನ ತಿಳಿಸುತ್ತದೆ. ಈ ಜಿನಾಲಯದ ಹೊಂಮ್ಮೈ ಪೂರ್ತಿ ಕೆತ್ತನೆಯ ಕೆಲಸದಿಂದ ಕೂಡಿದ್ದು ದೂರದಿಂದ ನೋಡಿದರೆ ಅರಳಿದ ಕಮಲದಂತೆ ಗೋಚರವಾಗುವುದು ಯಕ್ಕಸುಂಬಿಯು ಸಹ ಚಿಕ್ಕೋಡಿ ತಾಲೂಕಿನ ಜೈನ ಕ್ಷೇತ್ರಗಳ ಒಂದು ಪ್ರಮುಖ ತಾಣವೆಂದೇ ಹೇಳಬಹುದು.

ಚಿಕ್ಕೋಡಿಯ ಪಶ್ಚಿಮಕ್ಕೆ ನಿಪ್ಪಾಣಿ – ಚಿಕ್ಕೋಡಿ ಮಾರ್ಗದ ಮೇಲೆ ಕುಪ್ಪನವಾಡಿ ಮತ್ತು ಕೋಥಳಿ ಗ್ರಾಮಗಳ ನಡುವೆ ಶ್ರೀ ೧೦೦೮ ಆಚಾರ್ಯ ರತ್ನ ದೇಶ ಭೂಷಣ ಮುನಿಗಳು ಸ್ಥಾಪಿಸಿದ ಆಶ್ರಮವಿದೆ. ಈ ಆಶ್ರಮದಿಂದ ಪೂರ್ವಕ್ಕೆ ಒಂದು ಕಿ. ಮಿ. ದೂರದ ಗುಡ್ಡದ ಮೇಲೆ ೨೧ ಅಡಿ ಎತ್ತರದ ಶ್ರೀ ೧೦೦೮ ಭಗವಾನ ಶಾಂತಿನಾಥ ತೀಥಂಕರರ ಮತ್ತು ೧೯ ಅಡಿ ಎತ್ತರದ ಶ್ರೀ ೧೦೦೮ ಭಗವಾನ ಚಂದ್ರಪ್ರಭು ತೀಥಂಕರರ ಮತ್ತು ಶ್ರೀ ೧೨೦೦೮ ಭಗವಾನ ಮಹಾವೀರ ತೀಥಂಕರರ ಮೂರ್ತಿಗಳನ್ನು ದಿನಾಂಕ ೧೨-೫-೧೯೭೮ ರಲ್ಲಿ ಸ್ಥಾಪಿಸಿದ್ದಾರೆ. ವಿಶಾಲವಾದ ಆವರಣದಲ್ಲಿ ಕಮಲ ಮಂದಿರ ಶ್ರೀ ಪಾರ್ಶ್ವನಾಥ ಮೂರ್ತಿ, ಶ್ರೀ ಆದಿನಾಥ ಮಂದಿರ, ಶ್ರೀ ರತ್ನತ್ರಯ ಮಂದಿರ, ಪ್ರವಚನ ಮಂದಿರ, ಮುನಿ ನಿವಾಸ, ಧರ್ಮಶಾಲೆ ಈ ಕಟ್ಟಡಗಳನ್ನು ಕಾಣಬಹುದು. ಆಚಾರ್ಯತ್ರಯರ ಸ್ಥಾಪನೆ ಶ್ರೀಗಿರಿಯನ್ನು ಶಾಂತಿಗಿರಿಯನ್ನಾಗಿ ಮಾಡಿ ತನ್ನ ವಿಶಾಲಾತ್ಮದಿಂದ ಭಕ್ತರನ್ನು, ಯಾತ್ರಿಕರನ್ನು ಆಕರ್ಷಿಸುತ್ತದೆ. ಇದರ ಉಸ್ತುವಾರಿಗಾಗಿ ಇಲ್ಲಿ ಟ್ರಸ್ಟ ಒಂದನ್ನು ಸ್ಥಾಪಿಸಿ 'ಮುನಿರತ್ನ ದೇಶಭೂಷಣರು' ಎಂಬ ಚೇತನಾ ಚಾರ್ಯರು ಇದನ್ನು ನೋಡಿಕೊಳ್ಳುತ್ತಾರೆ. ಕುಪ್ಪನವಾಡಿಯಲ್ಲಿ ಶ್ರೀ ನೇಮಿನಾಥ ದಿಗಂಬರ ಜೈನ ಮಂದಿರ ಮತ್ತು ಕೋಥಳಿಯಲ್ಲಿ ಶ್ರೀ ಆದಿನಾಥ ಮತ್ತು ಪದ್ಮಾವತಿ ಮಂದಿರಗಳು ಇವೆ. ಕೋಥಳಿಯಲ್ಲಿ ಫೀರಸಾಹೇಬರ ದರ್ಗಾವೊಂದಿದ್ದು ಎಪ್ರೀಲ ತಿಂಗಳಲ್ಲಿ ಇದರ 'ಉರ್ಸು' ನಡೆಯುತ್ತಿದ್ದು ಈ ಉರುಸಿನಲ್ಲಿ ಸರ್ವ ಧರ್ಮೀಯರು ಭಾಗವಹಿಸುತ್ತಾರೆ.

ಚಿಕ್ಕೋಡಿ ತಾಲೂಕಿನ ಯಡೂರಿನ ಸಮೀಪ ಕಲ್ಲೋಳ ಎಂಬ ಗ್ರಾಮವಿದೆ. ಈ ಗ್ರಾಮದ ಸನಿಹದಲ್ಲಿಯೇ ದೂಧಗಂಗಾ ಮತ್ತು ವೇಧಗಂಗಾ ನದಿಗಳು ಸಂಗಮವಾಗಿ ಕೃಷ್ಣಾ ನದಿಯನ್ನು ಸೇರುತ್ತವೆ. ಈ ಗ್ರಾಮದಲ್ಲಿ ಪುರಾತನ ನರಸಿಂಹ ದೇವರ ದೇವಸ್ಥಾನವಿದೆ. ಚಿಕ್ಕೋಡಿಯಿಂದ ಸುಮಾರು ೧೦ ಕಿ. ಮಿ. ದೂರದಲ್ಲಿ ನಣದಿಯಲ್ಲಿ ಹಾಲಸಿದ್ಧನಾಥರ ಗುಡಿಯಿದ್ದು ಇಲ್ಲಿ ಪ್ರತಿ ವರ್ಷ ಚೈತ್ರ ಮಾಸದ ಸಪ್ತಮಿಯ ಐದನೇ ದಿನದಂದು ಬೃಹತ್ ಪ್ರಮಾಣದ ಜಾತ್ರೆಯು ನಡೆಯುತ್ತದೆ.

ಚಿಕ್ಕೋಡಿ ತಾಲೂಕಿನ ಹೋಬಳಿಗಳಲ್ಲಿ ನಾಗರಮುನ್ನೋಳ್ಳಿ ಒಂದು ಪವಿತ್ರ ಸ್ಥಳ ಇಲ್ಲಿ ಶ್ರೀ ಸಿದ್ದೇಶ್ವರ ದೇವಸ್ಥಾನವಿದೆ. ಈ ಸಿದ್ದೇಶ್ವರ ದೇವಸ್ಥಾನದ ಜಾತ್ರೆಯು

ವರ್ಷದ ಕಾರ್ತಿಕ ಪೂರ್ಣಿಮೆಯ ಶುದ್ಧ ಪ್ರತಿಪದೆಯಂದು ನಡೆಯುತ್ತದೆ. ಈ ಹೋಬಳಿಗೆ ಹೊಂದಿಕೊಂಡಿರುವ ಬೆಳಕೂಡ ಹನುಮಪ್ಪ ಮತ್ತು ತಾಲೂಕಿನ ಇನ್ನೊಂದು ಗ್ರಾಮವಾದ ತೋರಣಹಳ್ಳಿಯ ಹನುಮಂತ ದೇವರು ಬಹು ಜನಾಕರ್ಷನೆಯನ್ನು ಹೊಂದಿದ ಗ್ರಾಮ ದೇವರುಗಳಾಗಿವೆ. ಕೇರೂರಿನ ಅರಣ್ಯ ಸಿದ್ಧ ಈ ಪ್ರದೇಶದ ಇನ್ನೊಬ್ಬ ಆರಾಧ್ಯ ದೇವ ಎಂದೆನಿಸಿಕೊಂಡಿದ್ದಾನೆ.

ಚಿಕ್ಕೋಡಿ ತಾಲೂಕಿನ ಅಪ್ಪಾಚಿವಾಡಿ ನವನಾಥರಲ್ಲಿ ಒಬ್ಬರಾದ ಹಾಲಸಿದ್ಧದನಾಥರ ಸಮಾಧಿಯನ್ನು ಹೊಂದಿದ ಹಿಂದೂ ಮುಸ್ಲಿಂರ ಭಾವೈಕ್ಯತೆಯ ಪ್ರಸಿದ್ದ ಧಾರ್ಮಿಕ ಕೇಂದ್ರ ಇದಾಗಿದೆ. ಇದು ಸಾವಿರಾರು ವರ್ಷಗಳಿಂದ ಕರ್ನಾಟಕ ಮತ್ತು ಮಹಾರಾಷ್ಟ್ರದ ಸಾಮಾಜಿಕ ಸಾಂಸ್ಕೃತಿಕ ಮತ್ತು ಐಕ್ಯತೆಯನ್ನು ಕಾಪಾಡಿಕೊಂಡು ಹೋಗುವ ಜಾಗ್ರತಾ ಅಧ್ಯಾತ್ಮಿಕ ಪೀಠ ಎಂದು ಹೆಸರುವಾಸಿಯಾಗಿದೆ. ವಿಸ್ತೀರ್ಣವಾದ ಕಲ್ಲಿನ ಮೇಲೆ ಕಟ್ಟಿದ ಶ್ರೀ ಕ್ಷೇತ್ರ ಅಪ್ಪಾಚಿವಾಡಿಯ ಹಾಲಸಿದ್ಧನಾಥನ ದೇವಸ್ಥಾನ ಇಲ್ಲಿಯ ಹಾಲಸಿದ್ಧನಾಥರ ಬಗ್ಗೆ ತಿಳಿದುಕೊಳ್ಳಬೇಕಾದರೆ ನವನಾಥರ ಭಕ್ತಿಸಾರ ಗ್ರಂಥದ ೩೪, ೩೫, ೩೬, ಈ ಅಧ್ಯಯನದಲ್ಲಿಯ ರೇವಣನಾಥರ ಅವತಾರದ ಕಾರ್ಯದ ಬಗ್ಗೆ ಮಾಹಿತಿಯನ್ನು ನೋಡಬಹುದು. ಕರ್ನಾಟಕದಲ್ಲಿ ಈ ರೇವಣನಾಥರನ್ನು ಹಾಲಸಿದ್ಧನಾಥನಂದು ಕರೆಯುವರು. ಹಾಲಸಿದ್ಧನಾಥರ ಬಗ್ಗೆ ಹಲವಾರು ಪೌರಾಣಿಕ ಕಥೆಗಳಿದ್ದು ಇವರೊಬ್ಬ ಪ್ರಚಂಡ ಪುರುಷರು ಆಗಿದ್ದರು ಎಂದು ನೆಂಬಲಾಗಿದೆ. ಈ ದೇವಾಲಯಕ್ಕೆ ಹಲವಾರು ಜನರು ಇಂದಿಗೂ ಸಹ ನಡೆದುಕೊಳ್ಳುತ್ತಾರೆ.

ಚಿಕ್ಕೋಡಿ ತಾಲೂಕಿನ ಧಾರ್ಮಿಕ ಮಹಾಪುರುಷರಲ್ಲಿ ಇನ್ನೊಬ್ಬ ಮಹಾಪುರುಷ ಎಂದರೆ ಆದಮಾಪುರದ ಸಂತ ಬಾಳುಮಾಮಾ. ಸಂತ ಬಾಳುಮಾಮಾ ಕ್ರಿ. ಶ. ೧೮೯೪ ರಲ್ಲಿ ಚಿಕ್ಕೋಡಿ ತಾಲೂಕಿನ ಅಕ್ಕೋಳಎಂಬ ಗ್ರಾಮದಲ್ಲಿ ಜನಿಸಿದರು. ಈತನ ತಂದೆ ಮಾಯಪ್ಪ ತಾಯಿ ಸತ್ಯವ್ವಾ ,ಚಿಕ್ಕಂದಿನಲ್ಲಿ ಈತನಿಗೆ ದನಕಾಯುವ ಕೆಲಸವನ್ನು ಈತನ ತಂದೆ ತಾಯಿಗಳು ಹಚ್ಚಿದರು. ಅಗಾಧವಾದ ಪ್ರಾವಿಣ್ಯತೆಯನ್ನು ಹೊಂದಿದ ಈತ ವಯಸ್ಕನಾದ ಮೇಲೆ ತನ್ನ ಮಾವನ ಮಗಳಾದ ಗಂಗೂಬಾಯಿ ಇವಳ ಜೊತೆಯಲ್ಲಿ ಮದುವೆ ಮಾಡಿಕೊಂಡರು. ಈತ ಚಿಕ್ಕ ಮಕ್ಕಳಿಂದ ಹಿಡಿದು ದೊಡ್ಡವರ ಬಾಯಿಯಲ್ಲಿಯೂ 'ಬಾಳುಮಾಮಾ' ಎಂದೇ ಪರಿಚಯವಾಗಿದ್ದ. ಸಂಸಾರಿಕ ಜೀವನದಲ್ಲಿ ಆಸಕ್ತಿರನ್ನು ತೋರಿಸಲಾರದ ಬಾಳುಮಾಮಾ ಲೋಕ ಕಲ್ಯಾಣದ ಮಾರ್ಗ ಹಿಡಿದು ನಿರಂತರ ಈಶ್ವರನ ಸೇವೆಯಲ್ಲಿ ಮಗ್ನರಾದರು. ತಮ್ಮ ಹೆಂಡತಿ ಮತ್ತು ಸಂಸಾರವನ್ನು ತ್ಯಜಿಸಿದ ಇವರು ಗಾರಗೋಟಿಯ ಪರಮಹಂಸರ ಶ್ರೀ ಮುಳಮಹಾರಾಜ ಇವರ ಶಿಷ್ಯತ್ವವನ್ನು ೧೭ ವರ್ಷಗಳ ತರುವಾಯ ಸಪ್ಟಂಬರ ೪, ೧೯೬೬ ರಂದು ಈಗಿನ ಮಹಾರಾಷ್ಟ್ರದ ಆದಮಾಪೂರದಲ್ಲಿ ( ಗಾರಗೋಟಿ) ಸಮಾಧಿ ತೆಗೆದುಕೊಂಡರು. ಇಲ್ಲಿ ಬಾಳುಮಾಮಾ

ಹಾಗು ಪರಮಹಂಸ ಮೂಳಮಹಾರಾಜ ಇಬ್ಬರು ಯೋಗ ಪುರುಷರ ಗುಡಿಯನ್ನು ಕಟ್ಟಿಸಲಾಗಿದೆ. ಬಾಳುಮಾಮಾ ಮಹಾರಾಷ್ಟ್ರ ದೇಶದಲ್ಲಿ ಸಮಾಧಿಯಾದರೂ ಚಿಕ್ಕೋಡಿ ತಾಲೂಕಿಗೆ ಚಿರಪರಿಚಿತ ಧಾರ್ಮಿಕ ವ್ಯಕ್ತಿಯಾಗಿದ್ದಾರೆ. ಬಾಳುಮಾಮಾನ ಕಾಲದಲ್ಲಿ ಈತನ ಕೈಯಿಂದ ಸಾಕಿದ ಕುರಿಗಳ ತಂಡ ಈಹೊತ್ತಿಗೂ ಸಹ ಬೆಳೆದು ಹಲವಾರು ರೋಗಗಳನ್ನು ಗುಣಪಡಿಸುವಲ್ಲಿ ಯಶಸ್ಸನ್ನು ಪಡೆದು ವೈಧ್ಯ ಜಗತ್ತಿಗೆ ಸವಾಲೆನಿಸಿದೆ.

ನಿಪ್ಪಾಣಿ ಶಹರದ ಪೂರ್ವಕ್ಕೆ ೫ ಕಿ. ಮಿ. ಅಂತರದಲ್ಲಿರುವ ಪಟ್ಟಣಕುಡಿ ಗ್ರಾಮ ಈ ಗ್ರಾಮ ಐತಿಹಾಸಿಕ ಗ್ರಾಮವಾಗಿದೆ. ಈ ಗ್ರಾಮದ ಮೊದಲ ಹೆಸರು 'ಕುಡಿ' ಎಂದಿದ್ದು ನಂತರ ಸಾಂಗಲಿಯ ಪಟವರ್ಧನ ಸಂಸ್ಥಾನದವರು ಈ ಗ್ರಾಮವನ್ನು ಪಟವರ್ಧನಕುಡಿ ಎಂದು ಗುರುತಿಸಲು ಪ್ರಾರಂಭಿಸಿದರು. ಕಾಲಾಂತರದಲ್ಲಿ ಪಟವರ್ಧನಕುಡಿಯು ಪಟ್ಟನಕುಡಿ ಎಂದು ಪರಿವರ್ತನೆಯಾಯಿತು. ಪಟ್ಟನಕುಡಿಯಲ್ಲಿ ಸೂರ್ಯನಾರಾಯಣ ದೇವಾಲಯವಿದೆ. ಈ ಸೂರ್ಯನಾರಾಯಣ ದೇವಾಲಯದಲ್ಲಿನ ಸೂರ್ಯನಾರಾಯಣ ಮೂರ್ತಿಯು ಕೋನಾರ್ಕದ ಸೂರ್ಯನಾರಾಯಣ ಮೂರ್ತಿಯನ್ನು ಹೋಲುತ್ತದೆ. ಈ ಮೂರ್ತಿಯು ನಿಂತಿದ್ದು ಎರಡೂ ಬದಿಗೆ ಸಂಧ್ಯಾ ಮತ್ತು ಉಷಾ ದೇವಿಯರ ಮೂರ್ತಿಯಿದೆ. ಈ ಮೂರ್ತಿಯ ಕೊರಳಲ್ಲಿ ಜನಿವಾರವಿದ್ದು ಹಣೆಯ ಮೇಲೆ ಕಲ್ಲಿನಲ್ಲಿ ಕೆತ್ತಿದ ಕಿರೀಟವಿದೆ. ಎರಡು ಕೈಗಳಲ್ಲಿ ಕಮಲ ಪುಷ್ಪ ಕಿವಿಯಲ್ಲಿ ಕವಚ ಕುಂಡಲ ಮತ್ತು ಮೂರ್ತಿಯ ಕೆಳಗಡೆ ಅಸ್ಪಷ್ಟವಾಗಿ ಗೋಚರಿಸುವ ಕುದುರೆಗಳಿವೆ. ಈ ದೇವಾಲಯದೊಂದಿಗೆ ಪಟ್ಟಣಕುಡಿಯಲ್ಲಿಯೇ ಮಹಾಲಕ್ಷಿ ಮಂದಿರವಿದ್ದು ಇದು ಸಾವಿರಾರು ಭಕ್ತರ ಪವಿತ್ರ ತಾಣವೆಣಿಸಿದೆ. ಈ ಮಹಾಲಕ್ಷ್ಮೀ ದೇವಿಯು ಸಾಂಸ್ಕೃತಿಕ ಪರಂಪರೆಯು ತಲೆ ತಲೆಮಾರಿನಿಂದ ವೈಭವವನ್ನು ಕಾಯ್ದಿರಿಕೊಂಡಿರುವ ದೇವಿಯ ದೇವಸ್ಥಾನವಾಗಿದೆ. ಈ ದೇವಿಯ ಗರ್ಭ ಗೃಹದಲ್ಲಿ ಪಾರ್ವತಿ ದೇವಿಯ ಮೂರ್ತಿ ಇದೆ. ಇದು ಚತುರ್ಭುಜಗಲನ್ನು ಹೊಂದಿದ್ದು ಪದ್ಮ, ಸರ್ಪ, ಖಡ್ಗ ಮತ್ತು ವರದ ಹಸ್ತದ ಕೃಪೆ ಭಕ್ತರಮೇಲಿದೆ. ಅದೇ ರೀತಿ ಮೂರ್ತಿಯ ಹಣೆಯಮೇಲೆ ಏಳು ಹೆಡೆಯ ಸರ್ಪದ ಛತ್ತವಿದೆ. ಈ ಮೂರ್ತಿಯು ಸಾಲಿಗ್ರಾಮದಂತಹ ಕರಿ ಕಲ್ಲಿನ ಅತ್ಯಂತ ಕಾಂತಿಯುತವಾದ ಮೂರ್ತಿ ಇದ್ದು ಗರ್ಭ ಗುಡಿಯ ಹೊರಗಿನ ಹಿತ್ತಾಳೆಯ ಚೌಕಟ್ಟಿನ ಪ್ರವೇಶ ದ್ವಾರದ ಮೇಲೆ ಸುಂದರ ಮತ್ತು ಆಕರ್ಷಕ ಕುಶಲದ ಕೆಲಸವನ್ನು ಕಾಣಬಹುದಾಗಿದೆ. ಶಕೆ ೧೫೨೧ ಎಂದು ಗುರುತಿಸಲ್ಪಡುವ ಶಿಲಾಲೇಖವೊಂದು ಮಂದಿರದ ಹತ್ತಿರ ಕಂಡು ಬರುತ್ತದೆ. ಈ ಪ್ರದೇಶ ಮೊದಲು ಗಿಡಗಂಟೆ ಮತ್ತು ಕಾಡು ಪ್ರಾಣಿಗಳಿಂದ ಆವೃತ್ತವಾಗಿತ್ತು. ಆಗ ಛತ್ರಪತಿ ರಾಜಾರಾಮ ಮಹಾರಾಜರು ಈ ಪರಿಸರದಲ್ಲಿ ಬೇಟೆಯಾಡಲು ಬಂದಾಗ ಈ ದೇವಾಲಯದ ಕಟ್ಟಡವನ್ನು ಕಟ್ಟಿಸಿದನು. ಈ ಲಕ್ಷ್ಮೀ ದೇವಾಲಯವನ್ನು ಈಗ 'ಲಕ್ಷ್ಮೀಟೇಕ' ಎಂದು ಕರೆಯಲಾಗುತ್ತಿದೆ.

ಚಿಕ್ಕೋಡಿ ತಾಲೂಕಿನ ಅಂಕಲಿಯು ಶಿತೋಳೆ ಮನೆತನಕ್ಕೆ ಒಳಗಾದ ಒಂದು ಗ್ರಾಮ. ಈ ಗ್ರಾಮವು ಸಹ ಧರ್ಮಿಕ ಆರಾಧನೆಯ ಚಿಕ್ಕೋಡಿ ತಾಲೂಕಿನ ಒಂದು ಪ್ರಸಿದ್ಧ ಸ್ಥಳ. ಊರಿನಲ್ಲಿ ಮುಖ್ಯವಾಗಿ ವೀರಶೈವ, ಮರಾಠಾ, ಜೈನ, ಬ್ರಾಹ್ಮಣ, ಇಸ್ಲಾಮಿಕರು ನೆಲೆಸುತ್ತಿದ್ದು ವರ್ಷವಿಡೀ ಅವರವರ ಧರ್ಮದ ಆಚರಣೆ, ಹಬ್ಬ, ಹರಿದಿನ ಪುರಾಣ ಪ್ರವಚನಗಳು ಗ್ರಾಮಾದ್ಯಂತ ನೇರವೇರಿಸುವುದುಂಟು. ಈ ಗ್ರಾಮದ ಸಮೀಪ ಕೃಷ್ಣೆ – ಕರ್ಕಾ ನದಿಯ ಸಂಗಮ ಸ್ಥಳವಿದ್ದು ಅಲ್ಲಿ ಮಂತ್ರಾಲಯದ ಶ್ರೀ ರಾಘವೇಂದ್ರ ರಾಯರ ಬೃಂದಾವನವಿದೆ. ಇದು ಅಸಂಖ್ಯಾತ ಭಕ್ತರನ್ನು ಆಕರ್ಷಿಸುತ್ತದೆ. ಅದೇ ರೀತಿ ಗ್ರಾಮದೇವರಾದ ಶ್ರೀ ಸಿದ್ಧೇಶ್ವರ ಈ ದೇವರನ್ನು 'ಕೇತಿರಾಯರು' ಎಂತಲೂ ಕರೆಯುತ್ತಾರೆ. ಇಲ್ಲಿ ಈ ದೇವರ ಜಾತ್ರೆಯು ಪ್ರತೀ ವರ್ಷ ಶಿವರಾತ್ರಿ ಅಮವಾಸ್ಯೆಯ ಮಾರನೆಯ ದಿನ ನೆರವೇರುತ್ತದೆ. ಇಲ್ಲಿ ಕವಲು ಕಟ್ಟಿ ಭವಿಷ್ಯ ತಿಳಿದುಕೊಳ್ಳುವ ಸಂಪ್ರದಾಯ ಪ್ರಸಿದ್ಧವಾಗಿದೆ. ಇದೇ ಗ್ರಾಮದಲ್ಲಿ ಲಕ್ಷ್ಮೀ ದೇವಿಯ ಮಂದಿರವೊಂದಿದ್ದು ಈ ಮಂದಿರದ ಜಾತ್ರೆ ಪ್ರತಿ ಮೂರು ವರ್ಷಕ್ಕೊಮ್ಮೆ ಜರುಗುತ್ತದೆ. ಇವುಗಳೊಂದಿಗೆ ಜ್ಞಾನೇಶ್ವರ ಗುಡಿ, ವಿಠ್ಠಲ ಮಂದಿರ, ಚಂದ್ರಪ್ರಭ ತೀರ್ಥಂಕರ ಬಸದಿ, ಅಂಬಾಭವಾನಿ ಗುಡಿ ಮತ್ತು ಮಸೀದಿಗಳು ಹಿಂದೂ – ಮುಸ್ಲಿಂ ಸಾಮರಸ್ಯದ ಸಂಕೇತವಾಗಿ ಗ್ರಾಮದ ಸಂಸ್ಕೃತಿಗೆ ಮೆರಗನ್ನು ತಂದಿವೆ.

ಚಿಕ್ಕೋಡಿ ತಾಲೂಕು ಹಿಂದೂ ಮುಸ್ಲೀಂ ಭಾವಕ್ಯತೆಯ ಸಂಕೇತವಾಗಿದೆ. ಈ ತಾಲೂಕಿನ ಸಮಸ್ತ ನಾಗರಿಕರು ತಮ್ಮ ಧರ್ಮವನ್ನು ಎಣಿಕೆಗೆ ತೆಗೆದುಕೊಳ್ಳಲಾರದೆ ಎಲ್ಲಾ ಸಾಮಾಜಿಕ ಆಚರಣೆಗಳಲ್ಲಿ ಭಾಗವಹಿಸುವುದರೊಂದಿಗೆ ತಮ್ಮ ಸಹೋದರತ್ವ ಮತ್ತು ಬಂಧುತ್ವವನ್ನು ಸಕಲ ನಾಡಿನ ಜನತೆಗೆ ಬಿಂಬಿಸುವಂತವರಾಗಿದ್ದಾರೆ. ಇದಕ್ಕೆ ಉದಾಹರಣೆ ಎಂದರೆ ನಿಪ್ಪಾಣಿಯ ಹಜರತ್ – ಪಿರಾಣೆ – ಪೀರ ದಸ್ತಗೀರಸಾಹೇಬ ಮತ್ತು ಸದಲಗಾದ ಕುಡೇಖಾನ ಮಸೀದಿ' ಖಾರೇಖಾನ ಪೀರ ಮಸೀದಿ, ಡೇಪನಪೂರ ಮಸೀದಿ ಮತ್ತು ಸೇಳಕೆಗಲ್ಲಿಯಲ್ಲಿರುವ ಮಸೀದಿಗಳೇ ಉದಾಹರಣೆಗಳಾಗಿವೆ. ನಿಪ್ಪಾಣಿಯ ಹಜರತ್ – ಪಿರಾಣೆ – ಪೀರ ದಸ್ತಗೀರ ಸಾಹೇಬ ದರ್ಗಾ ನಗರದ ಮಧ್ಯ ಭಾಗದಲ್ಲಿದ್ದು ಇದು ಸರ್ವ ಧರ್ಮೀಯರ ಪವಿತ್ರ ಸ್ಥಾನವಾಗಿದೆ."೫" ಈ ದರ್ಗೆಯಲ್ಲಿ ಸಂತ ಮಹಾ ಪುರುಷ ಬಾಬಾ ಮಹಾರಾಜ ಚವ್ಹಾಣ ಸ್ಥಾಪನೆ ಮಾಡಿದ ಈ ದರ್ಗೆ ನಿಪ್ಪಾಣಿಯ ಸುತ್ತಮುತ್ತಲಿನ ಪ್ರದೇಶದ ತುಂಬೆಲ್ಲ ತನ್ನ ಪ್ರಚಾರತೆಯನ್ನು ಪಡೆದಿದ್ದು ಇಲ್ಲಿನ ಯತಿ ಬಾಬಾ ಮಹರಾಜ ಸರ್ವ ಧರ್ಮೀಯರ ಆರಾಧ್ಯ ವ್ಯಕ್ತಿಯಾಗಿದ್ದು ಈತ ಒಬ್ಬ ಸಾಮಾಜಿಕ ಕಳಕಳಿ ಮತ್ತು ಸರ್ವ ಧರ್ಮೀಯರ ಅನುಭಾವ ಸಂಬಂಧವನ್ನು ಬೆಸೆಯುವ ಕೊಂಡಿಯಂತಿದ್ದು ನಿಪ್ಪಾಣಿಯ ನಿರ್ಮಾತನಾದ ಸಿದ್ಧೋಜಿರಾವ ದೇಸಾಯಿಯವರು ಈ ಮಸೀದಿಯನ್ನು ಕಟ್ಟಿಸಿದರು. ವರ್ಷಕ್ಕೊಮ್ಮೆ ಈ ದಸ್ತಗೀರ ಸಾಹೇಬನ ಸಮಾಧಿ

ಸ್ಥಳದಲ್ಲಿ ೧೧ನೇ ತಿಂಗಳಿನಲ್ಲಿ ಮೂರು ದಿನಗಳವರೆಗೆ ವಿಜೃಂಭಣೆಯ ಉರುಸು ಜರುಗುತ್ತದೆ. ಈ ಊರಿನಲ್ಲಿ ಸರ್ವ ಕೋಮಿನ ಜನತೆ ಈ ಉರುಸಿನಲ್ಲಿ ಪಾಲ್ಗೊಳ್ಳುವ ಮುಖಾಂತರ ಏಕತೆಯನ್ನು ಬಿಂಬಿಸುತ್ತಾರೆ.

ಚಿಕ್ಕೋಡಿ ತಾಲೂಕಿನ ಇನ್ನಂದು ಹೋಬಳಿಯಾದ ಸದಲಗಾ ಹಿಂದೂ - ಮುಸ್ಲಿಂ ಏಕತೆಯ ಪವಿತ್ರ ಸ್ಥಾನವೆಂದೆನಿಸಿದೆ. ಇಲ್ಲಿ ಹಿಂದೂ-ಮುಸ್ಲಿಂ ಜನತೆ ಒಟ್ಟಾಗಿಯೇ ಸೇರಿ ಹಬ್ಬ ಆಚರಣೆಗಳನ್ನು ಆಚರಿಸುತ್ತಾ ನಾಡಿನ ಏಕತೆಗೆ ಉದಾಹರಣೆ ಎಣಿಸಿದ್ದಾರೆ. ಹಿಂದೂ ಧರ್ಮೀಯರ ಪವಿತ್ರ ಹಬ್ಬವೆಂದೆನಿಸಿದ ಗಣೇಶ ಚತುರ್ಥಿಯನ್ನು ಹಿಂದೂ-ಮುಸ್ಲಿಂ ಜನತೆ ಒಟ್ಟಾಗಿಯೇ ಸೇರಿ ಆಚರಿಸುತ್ತಾರಲ್ಲದೆ. ಮುಸ್ಲಿಂ ದರ್ಗಾಗಳಲ್ಲಿ ಹಿಂದೂ ಆರಾಧ್ಯ ದೇವನಾದ ಗಣೇಶ ವಿಗ್ರಹವನ್ನು ಪ್ರತಿಷ್ಠಾಪಿಸಿ ಕೋಮು ಗಲಭೇಗಳಿಂದ ಅಶಾಂತ ವಾತಾವರಣವನ್ನು ನಿರ್ಮಾಣವಾಗುತ್ತಿರುವ ಇಂದಿನ ದಿನಮಾನಗಳಿಗೆ ಸದಲಗಾ ಗ್ರಾಮ ಮಾದರಿಯಾಗಿದೆ. ಇಲ್ಲಿನ ಗಣೇಶೋತ್ಸವ ಮಂಡಳಿಗಳಿಗೆ ಹಿಂದೂ-ಮುಸ್ಲೀಂರು ಸದಸ್ಯರಾಗಿದ್ದಾರಲ್ಲದೆ ಕೆಲವು ಮಂಡಳಿಗಳಿಗೆ ಮುಸ್ಲೀಂ ಸಮುದಾಯದ ಮುಖಂಡರೇ ಗಣೇಶೋತ್ಸವ ಸಮೀತಿಯ ಅಧ್ಯಕ್ಷರಾಗಿದ್ದಾರೆ. ಇನ್ನು ಮುಸ್ಲೀಂರ ಮೋಹರಂ ಮತ್ತು ರಂಜಾನ್‌ದಂತಹ ಹಬ್ಬಗಳನ್ನು ಹಿಂದೂಗಳು ಆಚರಿಸುವುದರೊಂದಿಗೆ ನಾಡಿನ ಹಿಂದೂ-ಮಸ್ಲೀ ಏಕತೆಯ ಹಾಗೂ ಸಹೋದರತೆಯ ಭಾಂದವ್ಯವನ್ನು ಇವರು ಬೆಸೆದಿದ್ದಾರೆ.

ಹಿಂದೂ ಹಬ್ಬ ಆಚರಣೆಗಳಲ್ಲಿ ಮುಸೀಂ ಮುಹಿಳೆಯರು ಸಹಭಾಗಿಯಾಗಿ ಪಾಲ್ಗೊಳ್ಳುವ ಮುಖಾಂತರ ಪೂಜೆ ಪುನಸ್ಕಾರಗಳನ್ನು ನೆರವೇರಿಸುವದರೊಂದಿಗೆ ದೀಪ, ಆರತಿ ಮತ್ತು ದೇವರ ಭಕ್ತಿ ಗೀತೆಗಳನ್ನು ಸರಾಗವಾಗಿ ಹಾಡಿ ಹಿಂದೂ-ಮುಸ್ಲಿಂ ಭೇದ ಭಾವವನ್ನು ಮರೆತು ಸಹೋದರರಂತೆ ಆಚರಿಸುವುದನ್ನು ಈ ತಾಲೂಕಿನಲ್ಲಿ ಕಾಣಬಹುದಾಗಿದೆ.

ಈ ರೀತಿಯಾಗಿ ಚಿಕ್ಕೋಡಿ ತಾಲೂಕವು ಧಾರ್ಮಿಕ ಸಾಮ್ಯರಸ್ಯದ ಸಂಕೇತವಾಗಿದೆಯಲ್ಲದೆ ಆದಿ ಅನಾದಿ ಕಾಲದಿಂದಲೂ ಬೆಳೆದುಬಂದ ಆಚರಣೆಗಳೊಂದಿಗೆ ಇಂದಿನ ಆಚರಣೆಗಳನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ನಾಡಿನ ಭಾವೈಕ್ಯತಗಳು ಎಂದೆನಿಸಿದ ಹಲವಾರು ಮಠ, ಮಂದಿರಗಳು, ಮಸೀದಿಗಳು, ಜಾಗೃತ ಸ್ಥಳಗಳು ಹಾಗೂ ಜಿನಾಲಯಗಳು ಮತ್ತು ಇಂದಿನ ಮುಂದುವರೆದ ದಿನಮಾನಗಳಲ್ಲಿ ಧಾರ್ಮಿಕತೆಗೆ ಚಿಕ್ಕೋಡಿ ತಾಲೂಕವು ಪ್ರಸಿದ್ಧವೆನಿಸಿದೆ. ಗಡಿತಾಲೂಕಾದ ಚಿಕ್ಕೋಡಿಯು ಮರಾಠಿ ಹಾಗೂ ಕನ್ನಡ ಭಾಷಿಕರನ್ನು ಹೊಂದಿದ್ದರೂ ನಾಡಿನ ಇಲ್ಲಾ ಧರ್ಮಗಳ ಆರಾಧನಾ ಸ್ಥಳ ಎಂದೆನಿಸಿದೆ. ಈ ರೀತಿಯಾಗಿ ಚಿಕ್ಕೋಡಿ ತಾಲೂಕಿನಲ್ಲಿಯ ಧಾರ್ಮಿಕ ಸ್ಥಳಗಳ ಮಹತ್ವತೆಯೊಂದಿಗೆ ಬೆಳಗಾವಿ ಜಿಲ್ಲೆಯ ನಕಾಶೆಯಲ್ಲಿ ಒಂದು ವಿಶಿಷ್ಠ ಸ್ಥಾನವನ್ನು ಪಡೆದುಕೊಂಡಿದೆ.

# ಗ್ರಂಥ ಋಣ

| ಕೃತಿ | ಸಂಪಾದಕರು | ಪ್ರಕಟನೆ ವರ್ಷ | ಪುಟ |
| --- | --- | --- | --- |
| '೧' ಸಂಯುಕ್ತ ಕರ್ನಾಟಕ ದಿನಪತ್ರಿಕೆ | | ೧೧/೯/೦೮ | |
| '೨' ಚಿಂಚಣಿ ಮಠದ ಪರಿಚಯ ಗ್ರಂಥ | ಶ್ರೀ. ಮ.ನಿ.ಪ್ರನಿಲಕಂಠ ಸ್ವಾಮಿಗಳು, ಚರಮೂರ್ತಿ ಮಠ, ಚಿಕ್ಕೋಡಿ | ೧೯೭೧ | ೩ |
| '೩' ನಮಸ್ಕಾರ ಕನ್ನಡ ವಾರಪತ್ರಿಕೆ | | ೩೦/೬/೦೮ | ೧ |
| '೪' ಜೈನ ಕ್ಷೇತ್ರಗಳ ಐತಿಹ್ಯ | ಡಾ. ಪಿ. ಜಿ. ಕೆಂಪಣ್ಣವರ ಶ್ರೀ. ಟಿ. ಆರ್. ಜೋಡಟ್ಟಿ | ೧೯೯೦ | ೨೭೦ |

# ಚಿಕ್ಕೋಡಿ ತಾಲೂಕಿನ ಸಾಹಿತ್ಯಿಕ ಚರಿತ್ರೆ

ಒಂದು ಭಾಷೆ ಹಾಗೂ ಸಾಹಿತ್ಯ ಯಾವ ಪ್ರದೇಶದಲ್ಲಿ ವಿಫುಲವಾಗಿ ಬೆಳೆಯುತ್ತದೆಯೋ ಅದು ಅಷ್ಟೆ ಮಹತ್ವದ ಫಸಲನ್ನು ನೀಡುವಲ್ಲಿ ಸಫಲವಾಗುತ್ತದೆ. ಸಂಶೋಧಕನು ಇದನ್ನು ಗುರುತಿಸುವ ಬಗೆ ಹೇಗೆ? ಅದಕ್ಕಿರುವ ಮಾನದಂಡಗಳೇನು? ಎಂಬ ಪ್ರಶ್ನೆಗಳನ್ನು ನಯವಾಗಿ ಬಿಡಿಸುತ್ತ ಹೋದಂತೆ ಆ ಸಂಶೋಧಕ ತನ್ನ ಸಂಶೋಧನೆಯಲ್ಲಿ ಯಶಸ್ವಿಯಾಗುತ್ತಾನೆ.

ಒಂದು ದೇಶದ, ಪ್ರದೇಶದ ಅದರ ಫಲವತ್ತತೆಯ ಜೊತೆಗೆ ಅದರ ಚಾರಿತ್ರಿಕ ಅಧ್ಯಯನ ನಡೆಯಿಸಬೇಕಾದರೆ ಆ ಪ್ರದೇಶದ ಸಾಹಿತ್ಯದ ಅರಿವು ನಮಗೆ ಅತಿ ಅವಶ್ಯಕವಾಗಿ ಬೇಕು. ಆಗ ಸಂಶೋಧಕನು ತನ್ನ ಸಂಶೋಧನೆಯ ಮುಂದಿನ ಮಜಲನ್ನು ಹತ್ತಲು ಸಾಧ್ಯವಾಗುತ್ತದೆ. ಚಿಕ್ಕೋಡಿಯು ಬೆಳಗಾವಿ ಜಿಲ್ಲೆಯ ಒಂದು ಗಡಿ ತಾಲೂಕು. ಈ ತಾಲೂಕವು ನಾಡಿನ ಸಾಂಸ್ಕೃತಿಕ ರೂವಾರಿಗಳೆಂದೇ ಕರೆಯಿಸಿಕೊಳ್ಳುವ ಕವಿ, ಕಲಾವಿದ ಹಾಗೂ ಸಂಶೋಧಕರು ಆಯಾ ನಾಡಿನ ಬಹು ದೊಡ್ಡ ಆಸ್ತಿ, ಅವಕಿಲ್ಲ ಆರೋಗ್ಯಪೂರ್ಣ ಸಮಾಜ ರಚನೆಯ ರೂವಾರಿಗಳು ಹೀಗಾಗಿ ಅವರು ಯಾವುದೇ ಜಾತಿ ಎಣಿಕೆಯನ್ನು ಮಾಡಲಾರದೆ ಜಾತ್ಯಾತೀತರು ಹೌದು. ಹಾಗೂ ಸೀಮಾತೀತರೂ ಹೌದು. ತನ್ನ ಲೆಕ್ಕಣಿಕೆಗೆ ಪ್ರೇರಣೆ ನೀಡಿದ ಹುಟ್ಟೂರು ಹಾಗೂ ಆ ಪರಿಸರವನ್ನು ಮರೆಯುವಂತಿಲ್ಲ. ಏಕೆಂದರೆ ಅವರವರ ಸಾಹಿತ್ಯದ ಅವಲೋಕನೆ ಮಾಡುವಲ್ಲಿ ಅವು ತುಂಬ ಸಹಾಯಕಾರಿಯಾಗಬಲ್ಲವು. ಈ ನಿಟ್ಟಿನಲ್ಲಿ ನೋಡಿದಾಗ ಚಿಕ್ಕೋಡಿ ತಾಲೂಕಿನಲ್ಲಿ ಸಮೃದ್ಧವಾದ ಸಾಹಿತ್ಯದ ಕೃಷಿ ನಡೆದಿರುವದು ಕಂಡು ಬರುತ್ತದೆ. ಇದರ ಜೊತೆಯಲ್ಲಿ ಮರಾಠಿ ಸಾಹಿತ್ಯವು ತಾಲೂಕಿನಲ್ಲಿ ತನ್ನ ವೈಭವದೊಂದಿಗೆ ಅತಿ ಹುಲುಸಾಗಿ ಬೆಳೆಯುತ್ತಿರುವುದು ಆ ತಾಲೂಕಿನ ಭಾಷಾ ಬಾಂಧವ್ಯಕ್ಕೆ ಸಾಕ್ಷಿಯಾಗಿದೆ.

ಕರ್ನಾಟಕದ ಗಡಿ ತಾಲೂಕಾದ ಚಿಕ್ಕೋಡಿಯು ತನ್ನದೇ ಆದ ನೆಲ, ಜಲ ಪರಿಸರದ ಗುಣ, ಜನರ ನಡೆ, ನುಡಿ, ಆಚಾರ, ವಿಚಾರ ವ್ಯವಹಾರಕ್ಕೆ ತನ್ನದೇ ಆದ ಪರಂಪರೆಯನ್ನು ಹೊಂದಿದ್ದು ಸಾಹಿತ್ಯಿಕವಾಗಿ ಚಿಕ್ಕೋಡಿ ತಾಲೂಕೂ ತನ್ನದೇ ಆದ ವೈಶಿಷ್ಟತೆಯನ್ನು ಚಾರಿತ್ರಿಕ ದಾಖಲೆಗಳನ್ನು ಒಡಮೂಡಿಸಿಕೊಂಡು ತನ್ನ ಕೀರ್ತಿಯನ್ನು ಹಬ್ಬಿಸಿಕೊಂಡಿದೆ.

ಕನ್ನಡ ಸಾಹಿತ್ಯದ ಜ್ಯೋತಿಯನ್ನು ಚಿಕ್ಕೋಡಿ ತಾಲೂಕಿನಲ್ಲಿ ಬೆಳಗಿಸಿದ ಕೀರ್ತಿ ಸವದತ್ತಿಯ ರಟ್ಟ ಅರಸರಿಗೆ ಸಲ್ಲುತ್ತದೆ.[೧] "ಕುಹೂಂಡಿ ಮೂಸಾಸಿರ" ನಾಡನ್ನು ಕ್ರಿ ಶ ೯೩೦ ರಿಂದ ೧೨೩೦ ರ ವರೆಗೆ ಆಳಿದ ಸವದತ್ತಿ ರಟ್ಟರು ನೂರಾರು ಕವಿ ವರ್ಮರಿಗೆ ತಮ್ಮ ಆಸ್ಥಾನದಲ್ಲಿ ಆಶ್ರಯ ನೀಡಿದ್ದರು. ಅವರು ಮಾಡಿದ ಈ ಸಾಧನೆ ಹೆಮ್ಮೆ ಪಡುವಂತಹುದಾಗಿದೆ. ಅದೇ ಅವಧಿಯಲ್ಲಿ ಇನ್ನೊಂದೆಡೆ ಕಲ್ಯೆಆಣವನ್ನು ರಾಜಧಾನಿಯನ್ನಾಗಿ ಇಟ್ಟುಕೊಂಡು ಆಡಳಿತವನ್ನು ನಡೆಯಿಸಿದ ಕರಹಾಡದ ಶಿಲಾಹಾರರು ಅಪ್ಪಟ ಕನ್ನಡ ಅರಸರಾಗಿದ್ದರಲ್ಲದೆ ಕನ್ನಡ ನಾಡಿನ ಅಭಿವೃದ್ಧಿ, ಕನ್ನಡ ಭಾಷೆಯ ಬೆಳವಣಿಗೆಗೆ ತಮ್ಮ ವಿಶೇಷ ಸೇವೆಯನ್ನು ಸಲ್ಲಿಸಿರುವದನ್ನು ಇಲ್ಲಿ ನಾವು ಗಮನಿಸಬಹುದು. ಬೆಳಗಾವಿಯನ್ನು ತಮ್ಮ ಆಡಳಿತದ ಕೇಂದ್ರವನ್ನಾಗಿ ಮಾಡಿಕೊಂಡು ಆಡಳಿತ ಮಾಡುತ್ತಿದ್ದ ರಟ್ಟರ ಕುಹೂಂಡಿ ಮೂಸಾಸಿರವನ್ನಾಳಿದರು. ರಟ್ಟರ ಮಹಾಮಂಡಳೇಶ್ವರ "ವಿಜಯಾದಿತ್ಯದೇವ" ಮುಂತಾದ ಸರಸ್ವತಿಯ ಆರಾಧಕರಿಂದ ಕನ್ನಡ ಸಾಹಿತ್ಯವು ಚಿಕ್ಕೋಡಿ ಪ್ರದೇಶದ ವ್ಯಾಪ್ತಿಯಲ್ಲಿ ಹುಲುಸಾಗಿ ಬೆಳೆಯಲು ಸಾಧ್ಯವಾಗಿರುವದನ್ನು ನಾವು ಇಲ್ಲಿ ಸ್ಮರಿಸಬಹುದು.

ಶಿಲಾಹಾರರ ಮಹಾಮಂಡಲಕ್ಕೆ ಶ್ರೇಷ್ಠ ಆಚಾರ್ಯರೆನಿಸಿಕೊಂಡ ಕುಮಾರ ಕೀರ್ತಿ ಪಂಡಿತ ಹಾಗೂ ವಿಜಯ ಕೀರ್ತಿ ಎಂಬುವರಿಗೆ ಆಶ್ರಯ ನೀಡಿದ್ದರು. ಇವರ ಮಾರ್ಗ ದರ್ಶನದಲ್ಲಿ ತಮ್ಮ ಆಡಳಿತದ ವಿಭಾಗದಲ್ಲಿ ಸಾಹಿತ್ಯದ ಬೆಳವಣಿಗೆಗೆ ಪ್ರೋತ್ಸಾಹ ನೀಡಿದ್ದರು. ಹೀಗಾಗಿಯೇ ಕ್ರಿ. ಶ. ೧೧೬೫ ರ ಸುಮಾರಿನಲ್ಲಿ ಕೊಲ್ಹಾಪೂರದ ಶಿಲಾಹಾರ ವಂಶದ ವಿಜಯಾದಿತ್ಯನ ಪ್ರೇರಣೆಯಿಂದ ಕುಹೂಂಡಿ ಮೂಸಾಸಿರ ಮಂಡಲದ ಎಕ್ಕೆ ಸಂಬುಗ (ಈಗಿನ ಯಕ್ಸಂಬಾ) ಯ ಕವಿ ಹೊಲ್ಲಗಾವುಂಡನು "ವರದರ್ಶನ ಬೋಧ ಚರಿತ್ರೆ" ಯನ್ನು ರಚಿಸಿದನೆಂದು ತಿಳಿಯುವದರಿಂದ ಈ ಭಾಗದ ಸಾಹಿತ್ಯ ಕೃಷಿಯ ಪ್ರಾಚೀನತೆಗೆ ಯಕ್ಕಸಂಬುಗೆಯ ಶಾಸನವು ವಿಶೇಷವಾದ ಬೆಳಕನ್ನು ಚಲ್ಲುತ್ತದೆ. ಅದೇ ಶಿಲಾಹಾರರ ವಿಜಯಾದಿತ್ಯನು ಕಾಳಿಯಣ ಮತ್ತು ಅವನ ಹೆಂಡತಿ ಲಚ್ಚದೇವಿಯರ ಎರಡನೆಯ ಮಗನಾದ IIನೇ ಅಚ್ಚಣ್ಣನು "ನಲ್ನುಡಿ ಜಾಣ" ಎಂಬ ಹೊಗಳಿಕೆಗೆ ಪಾತ್ರನಾಗಿದ್ದನಲ್ಲದೆ "ಸರಸತಿತಂನನಾಲಿಗೆಯ ನೋಲಗಿಪಳ್" ಎಂಬ ಅಭಿಮಾನ ಧನನಾಗಿದ್ದನು. ಈತನು ಸಹ ತನ್ನ ಅವಧಿಯಲ್ಲಿ ಶ್ರೇಷ್ಠ ಕಾವ್ಯ ರಚನೆಯ ಕಾರ್ಯವನ್ನು ಕೈಕೊಂಡಿರಲೇಬೇಕು. ಆದರೆ ಈ ಕಾಲಾವಧಿಯ ಕೃತಿಗಳು ಲಬ್ಯವಾಗದೇ ಇರುವುದರಿಂದ ಈ ಕಾಲಾವಧಿಯ ಶಾಸನ ಕವಿಯಾದ ಸೇನ, ಭೋವ ಸಿಂಗಯ್ಯ ನೆಲಬುವನು ಜಯಶೆಟ್ಟಿ ಎಂಬುವರ ಮಗನಾಗಿದ್ದುಕೊಂಡು "ಕರೋಶಿ" ಶಿಲಾಶಾಸನವನ್ನು ರಚಿಸಿದ್ದು ಶಿಲಾಹಾರ ಅರಸರ ಕಾಲಾವಧಿಯಲ್ಲಿಯೇ ಕವಿ ಕರ್ಣಪಾರ್ಯನು "ನೇಮಿನಾಥ ಪುರಾಣ" ವೆಂಬ ಸುಂದರ ಕಾವ್ಯವನ್ನು ರಚಿಸಿ ಸಾರಸ್ವತ ಲೋಕಕ್ಕೆ ಕೊಡುಗೆಯಾಗಿ ನೀಡಿದ್ದು

ವಿಶೇಷವಾಗಿದೆ. ಈ ನಿಟ್ಟಿನಲ್ಲಿ ಮತ್ತಷ್ಟು ಸಂಶೋಧನೆಗಳು ನಡೆದರೆ ಚಿಕ್ಕೋಡಿ ತಾಲೂಕಿನ ಹಳೆಗನ್ನಡ ಸಾಹಿತ್ಯದ ಮೇಲೆ ಹೊಸ ಬೆಳಕನ್ನು ಚೆಲ್ಲಲು ಸಾಧ್ಯವಿದೆ.

ನಂತರದ ಕಾಲಾವಧಿಯಲ್ಲಿ ಸಾಹಿತ್ಯ ರಚನೆಯ ಮೂಲಕ ಸಂಸ್ಕೃತಿ ಸಂವರ್ಧನೆಯು ಈ ಭಾಗದಲ್ಲಿ ಕೆಲ ಶತಮಾನಗಳ ಮಟ್ಟಿಗೆ ಸ್ಥಗಿತಗೊಂಡಿದ್ದಂತೂ ಸತ್ಯ ಸಂಗತಿಯಾಗಿದೆ. ೧೯ ನೆಯ ಶತಮಾನದ ಅಂತ್ಯದ ಕಾಲಾವಧಿಯ ಮಹತ್ವಪೂರ್ಣ ಕವಿಯೆಂದರೆ ಶಮನೇವಾಡಿಯ "ದೇವೇಂದ್ರತನಯ" ಎಂಬುವರು ನಿಂತು ಹೋದ ಸಾಹಿತ್ಯ ರಚನೆಯ ಕಾರ್ಯವನ್ನು ಪುನರಾರಂಭಿಸುವದರೊಂದಿಗೆ ಕಂಡು ಬಂದ ಸಾಹಿತ್ಯದ ಕೊರತೆಯನ್ನು ಸರಿಪಡಿಸುವಲ್ಲಿ ಇವರು ಯಶಸ್ವಿಯಾದರು. ದ್ವಿಭಾಷಾ ಪಂಡಿತರಾಗಿದ್ದ "ದೇವೆಂದ್ರತನಯ" ಕನ್ನಡ ಹಾಗೂ ಮರಾಠಿ ಭಾಷೆಯಲ್ಲಿ ನಾಟಕಗಳನ್ನು, ಲಾವಣಿಗಳನ್ನು ರಚಿಸುವುದರೊಂದಿಗೆ ಮುಂಬರುವ ಸಾಹಿತಿಗಳಿಗೆ ಪ್ರೇರಣೆಯೊಂದಿಗೆ ಪ್ರೇರಕ ಶಕ್ತಿಯಾದರು. ಇದೇ ಅವಧಿಯ ವಿಶಿಷ್ಟ ಕವಿಯೆಂದೇ ಪ್ರಸಿದ್ಧಿಯನ್ನು ಪಡೆದೆ ವಿಶಿಷ್ಟ ಜನಪದ ಕವಿಯಾದ ಕಾಡಾಪುರದ ಬಸವಂತಪ್ಪ ಎಂಬವರು "ಕಾಡಾಪೂರದ ಭಕ್ತ" ಎಂಬ ಅಂಕಿತವನ್ನಿಟ್ಟುಕೊಂಡು , ಜನಪದ ಸಾಹಿತ್ಯದ ಶ್ರೇಷ್ಠ ಕೊಡುಗೆಗಳಾದ ಕೃಷ್ಣಪಾರಿಜಾತ, ವೆಂಕಟೇಶ ಪಾರಿಜಾತ, ರಾಮ ಪಾರಿಜಾತ ಮತ್ತು ಶಿವ ಪಾರಿಜಾತ ಎಂಬ ಸಣ್ಣಾಟಗಳನ್ನು "ವೇಮನಾರಾಧ್ಯ" ಹಾಗೂ "ಸಿರಿಯಾಳ" ಎಂಬ ಬಯಲಾಟಗಳನ್ನು ಬರೆದು ಜನಪದ ಹಾಗೂ ಸಾಹಿತ್ಯ ಲೋಕದ ಶ್ರೀಮಂತಿಕೆಯನ್ನು ಬೆಳೆಸುವಲ್ಲಿ ಸಹಕರಿಸಿದ್ದಾರೆ. ಇದೆ ಊರಿನ ಮತ್ತೊಬ್ಬ ಶ್ರೇಷ್ಠ ಜನಪದ ಕವಿಯಾದ "ಸಿದ್ದಪ್ಪ ಸವದತ್ತಿ"ಎಂಬುವರು ಅನಕ್ಷರಸ್ಥರಾಗಿದ್ದು ಇವರು "ಗೀಗೀ" ಪದಗಳನ್ನು ಹಾಗೂ ಲಾವಣಿ ಪದಗಳನ್ನು ರಚಿಸಿರುವುದು ಇವರ ಶ್ರೇಷ್ಠ ಜನಪದ ಸಾಹಿತ್ಯದ ಅಭಿರುಚಿಯನ್ನು ಎತ್ತಿ ತೋರಿಸುತ್ತದೆ. ದಾಸಕೂಟ ಸಾಹಿತ್ಯ ಪರಂಪರೆಯ ಭಕ್ತಿ ಕವಿ ಎಂದೆ ಹೆಸರು ವಾಸಿಯಾದ ಶ್ರೀ ಭಗವಂತರಾಮ ಎಂಬುವರು ಚಿಕ್ಕೋಡಿಯಲ್ಲಿ ನೆಲೆ ನಿಂತು "ಪ್ರಾಣೇಶ ವಿಠಲ" ಎಂಬ ಅಂಕಿತ ನಾಮವನ್ನುಬಳೆಯಿಸಿಕೊಂಡು ನೂರಾರು ಕೀರ್ತನೆಗಳನ್ನು ರಚಿಸಿ ದಾಸ ಸಾಹಿತ್ಯದ ಬೆಳವಣಿಗೆ ಹಾಗೂ ವಿಕಾಸಕ್ಕೆ ಕಾರಣಿಕರ್ತರಾದರು. ಇವರ ಈ ಕಾರ್ಯ ಅಭಿಮಾನ ಪಡುವಂತಹದು. ಈವರ ಸಾಹಿತ್ಯದ ಕುರಿತಾದ ಮುಂದು ವರೆದ ಸಂಶೋಧನೆಗಳು ಇನ್ನೂ ಜರುಗಬೇಕಾಗಿದ್ದು ಅಂತಹ ಕಾರ್ಯವೇನಾದರೂ ಪೂರ್ಣಗೊಂಡಲ್ಲಿ ಒಂದು ಮಹತ್ವದ ಜಾನಪದ ಸಾಹಿತ್ಯ ಹೊರಹೊಮ್ಮುವಲ್ಲಿ ಸಂಶಯವಿಲ್ಲ. ಇವರೊಂದಿಗೆ ನೆನೆಯ ಬೇಕಾದ ಮತ್ತೊಂದು ಹೆಸರೆಂದರೆ "ಅಂಕಲಿಯ ಇಮಾಮಬಾಯಿ" ಎಂಬವರು ಸಹ ಜಾನಪದ ಕವಿಗಳಾಗಿದ್ದರು ಎಂಬುದು ನಮಗೆ ತಿಳಿದು ಬರುತ್ತದೆ.

ಸಾಹಿತ್ಯ ಹಾಗೂ ಜನಪದದ ಜೊತೆಗೆ ಚಿಕ್ಕೋಡಿ ತಾಲೂಕು ರಂಗಭೂಮಿದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡ ಶ್ರೇಷ್ಠ ಪ್ರದೇಶವಲ್ಲದೆ ರಂಗಭೂಮಿಯಲ್ಲಿಯೇ ಬಹು

ದೊಡ್ಡ ಹೆಸರು ಮಾಡಿದ ನಾಟಕಕಾರರಾದ ಚಿಕ್ಕೋಡಿಯ ಶಿವಲಿಂಗ ಸ್ವಾಮಿಗಳು ತಮ್ಮ ಹೆಸರಿನಲ್ಲಿಯೇ "ಶ್ರೀ ಶಿವಲಿಂಗೇಶ್ವರ ನಾಟ್ಯ ಸಂಘ ಚಿಕ್ಕೋಡಿ" ಎಂಬ ಕಂಪನಿಯನ್ನು ಕಟ್ಟಿ "ವೀರರಾಣಿ ಕಿತ್ತೂರು ಚನ್ನಮ್ಮ ಹಾಗೂ ರಾಷ್ಟ್ರಧ್ವಜ" ಎಂಬ ಹದಿನೇಳು ನಾಟಕಗಳನ್ನು ಬರೆದು, ಆಡಿಇಸಿ ಶ್ರೇಷ್ಠ ವ್ಯಕ್ತಿಗಳಾಗಿದ್ದಾರೆ. ಇವರು ರಂಗ ಪ್ರಪಂಚಕ್ಕೆ ನೀಡಿದ ಕಾಣಿಕೆ ಅಷ್ಟಿಷ್ಟಲ್ಲ ಇವರ ಈ ರಂಗ ಪ್ರವೃತ್ತಿ ರಂಗ ಪ್ರಪಂಚದಲ್ಲಿಯೇ ಒಂದು ಚಿರಸ್ಮರಣೀಯ ಘಟ್ಟ ಎಂದೆನಿಸಿದೆ. ಗೀಗೀ, ಲಾವಣಿ, ಪಾರಿಜಾತ, ಸಣ್ಣಾಟಗಳಂತಹ ಜನಪದ ಸಾಹಿತ್ಯದ ಸೃಷ್ಠಿಯು ಒಂದು ಕಡೆ ನಡೆಯುತ್ತಿದ್ದರೆ ಮತ್ತೊಂದು ಕಡೆ ಆಗಲೇ ರಚನೆಗೊಂಡ ಹಳೆಗನ್ನಡ ಕಾವ್ಯಗಳ ಅಧ್ಯಯನವು ನಡೆಯುತ್ತಿತ್ತಾದರೂ ಅವುಗಳ ಪರಿಷ್ಕರಣೆ ಹಾಗೂ ವಸ್ತುನಿಷ್ಠ ಸಂಪಾದನೆಯ ಕಾರ್ಯವು ಶಿಸ್ತುಬದ್ಧವಾಗಿ ಜರುಗಬೇಕೆಂಬ ಉದ್ದೇಶದಿಂದ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡ ಅಪರೂಪದ ಶ್ರೇಷ್ಠ ವ್ಯಕ್ತಿ ಎಂದರೆ ವಿದ್ವತ್ತಿನ ಕಣಜ ಎಂದೇ ಕರೆಯಲಾಗುತ್ತಿದ ಡಾ. ಆ.ನೇ. ಉಪಾಧ್ಯೆಯರು.

ಡಾ. ಆ. ನೇ. ಉಪಾಧ್ಯೆಯವರು ಸಂಶೋಧನಾ ರಂಗದಲ್ಲಿ ಚಿಕ್ಕೋಡಿ ತಾಲೂಕಿನ ಹೆಸರನ್ನು ದೇಶ ವಿದೇಶ ಮಟ್ಟಕ್ಕೆ ತಲುಪಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಡಾ. ಆ. ನೇ. ಉಪಾಧ್ಯೆಯವರು ಪ್ರವಚನಸಾರ, ಪರಮಾತ್ಮ ಪ್ರಕಾಶ; ತಿಲೋಯಪಣ್ಣತ್ತಿ, ಬೃಹತ್ಕಥಾಕೋಶ, ಲೀಲಾವೀಶಹಾ, ಕುವಲಯಮಾಲಾ, ಹಾಗೂ ಧೂರ್ತಾಖ್ಯಾನ ಮುಂತಾದ ಶ್ರೇಷ್ಠ ಪ್ರಾಕೃತ ಕೃತಿಗಳನ್ನು ಪರಿಷ್ಕರಿಸಿ ಸಂಪಾದಿಸಿ ಕೊಟ್ಟ ಡಾ ಆ. ನೇ. ಉಪಾಧ್ಯೆಯವರು ಕನ್ನಡದಲ್ಲಿ ರಾಮವಿಜಯಕಾವ್ಯ ವಸ್ತುನಿಷ್ಠವಾಗಿ ಸಂಪಾದಿಸಿ ಕೊಡುವದರೊಂದಿಗೆ ಸಂಶೋಧಕರ ಒಂದು ಗುಂಪನ್ನೇ ಬೆಳೆಯಿಸಿ ಸಾಹಿತ್ಯದ ಬೆಳವಣಿಗೆಗಾಗಿ ಶ್ರಮಿಸಿದ ಮಹಾನ ವ್ಯಕ್ತಿಗಳೆಸಿಕೊಂಡವರು ಇವರು ಚಿಕ್ಕೋಡಿ ತಾಲೂಕಿನ ಶ್ರೇಷ್ಠ ಸಾಹಿತ್ಯದೊಂದಿಗೆ ಒಬ್ಬ ವಿದ್ವಾಂಸ ಹಾಗೂ ಸಂಶೋಧಕರಾಗಿ ತಮ್ಮದೇ ಆದ ವಿಶೇಷ ಛಾಪನ್ನು ಇವರು ಚಿಕ್ಕೋಡಿ ತಾಲೂಕಿಗೆ ನೀಡಿದ್ದಾರೆ. ಕ್ರಿ. ಶ. ೧೯೫೪ ರಲ್ಲಿ ಚಿಕ್ಕೋಡಿ ತಾಲೂಕಿನ ಪ್ರಮುಖ ಗ್ರಾಮವಾದ ಶಮನೇವಾಡಿಯಲ್ಲಿ ಪ್ರಾರಂಭವಾದ "ಸ್ನೇಹ ಪ್ರಕಾಶನವು" ೧೯೫೪ ರಿಂದ ೧೯೫೮ರ ಮಾಧ್ಯದಲ್ಲಿ ೧೨ ಕೃತಿಗಳನ್ನು ಬರೆಯಿಸಿ ಅವುಗಳನ್ನು ಪ್ರಕಟಿಸಿದ ಕೀರ್ತಿ ಈ ಸ್ನೇಹ ಪ್ರಕಾಶನಕ್ಕೆ ಸಲ್ಲುತ್ತದೆ. ಈ ಸ್ನೇಹ ಪ್ರಕಾಶನವು ಕೈಕೊಂಡ ಸಾಹಿತ್ಯ ಸೇವೆ ಚರಿತ್ರಾರ್ಹವಾದುದು. ಕವಿ ಭುಜೇಂದ್ರ ಮಹೀಶವಾಡಿ, ಬಿ. ಎ. ಸನದಿ, ಶ್ರೀಕಾಂತ ಖೋತ, ಬಾಳು ಉಪಾಧ್ಯೆ ಹಾಗೂ ಬ. ಗಿ. ಯಲ್ಲಟ್ಟಿಯಂತಹ ಐದು ಜನ ಒಂದೇ ಮನಸ್ಸಿನ ವ್ಯಕ್ತಿಗಳಿಂದ ರೂಪವನ್ನು ಪಡೆದುಕೊಂಡ ಸ್ನೇಹ ಪ್ರಕಾಶನವು "ಐದಳ ಮಲ್ಲಿಗೆ" ಹಿಂಗಮಿರೆಯವರ – ಹುಲ್ಲು ಹೆಜ್ಜೆ, ಚಂದ್ರಶೇಖರ ಕಂಬಾರರ "ಮುಗುಳು" ಮುಂತಾದವುಗಳನ್ನು ಪ್ರಕಟಿಸಿದೆ.[೨] ಎಲೆಮರೆಯ ಕಾಯಿಯಂತೆ ಕಾವ್ಯರಂಗದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಹಿರಿಯ ಜೀವಿ ಬಾಳು ಉಪಾಧ್ಯೆಯವರು

"ಬಾಳ ಬಂಡಿ" ಎಂಬ ಕವನ ಸಂಕಲನದ ಮುಖಾಂತರ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಇದೇ ಭಾಗದ ಮತ್ತೊಬ್ಬ ಶ್ರೇಷ್ಠ ಸಾಹಿತಿ ಎಂದರೆ ಶ್ರೀಕಾಂತ ಖೋತ ಇವರು ಚಿಕ್ಕ ಮಕ್ಕಳ ಬಗ್ಗೆ ಮಾಹಿತಿ ಹೊಂದಿರುವ ಶಿಸು ಸಾಹಿತ್ಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು "ನೆಲ ಸಂಪಿಗೆ" ಎಂಬ ಕೃತಿಯನ್ನು ಬೆಳಕಿಗೆ ತಂದಿದ್ದಾರೆ. ಚಿಕ್ಕೋಡಿ ತಾಲೂಕಿನ ಬೋರಗಾಂವ ಗ್ರಾಮದ ಸಾಹಿತಿ ಶ್ರೀ ಜಿ. ಡಿ. ಮೈಶಾಳೆಯವರು ಕನ್ನಡ - ಹಿಂದಿ ಕೋಶವನ್ನು ರಚಿಸಿದ್ದು ಭಾಷಾ ಓದುಗರಿಗೆ ಸಹಾಯಕವಾಗುವ ಕೈಪಿಡಿ ಇದಾಗಿದೆ. ಇದರೊಂದಿಗೆ ಇನ್ನೂ ಹಲವಾರು ಪ್ರಬುದ್ಧಪೂರ್ಣ ಲೇಖನಗಳನ್ನು ಕಾದಂಬರಿಗಳನ್ನು ರಚಿಸಿದ ಸಾಹಿತಿ ಮೈಶಾಳೆಯವರಾಗಿದ್ದಾರೆ.

ಚಿಕ್ಕೋಡಿ ತಾಲೂಕಿನ ಬೆಡಕಿಹಾಳ ಗ್ರಾಮದಲ್ಲಿ ನೆಲೆನಿಂತು ಕನ್ನಡ - ಮರಾಠಿ ಬಾಂಧವದ ಸೇತುವೆಯಾಗಿ ಕಾರ್ಯ ನಿರ್ವಹಿಸಿದ ಪೋ: ಚಂದ್ರಕಾಂತ ಪೋಕಳೆಯವರು ಈ ಸಾಹಿತ್ಯ ವಿದ್ವತ್ ಪ್ರಪಂಚದಲ್ಲಿ ಬಹು ದೊಡ್ಡ ಹೆಸರು ಗಳಿಸಿ ವ್ಯಕ್ತಿಗಳಾಗಿದ್ದಾರೆ. ಮರಾಠಿ ಭಾಷೆಯಲ್ಲಿ ಹೆಸರುವಾಸಿಯಾದ ಶ್ರೇಷ್ಠ ಕೃತಿ " ಚಕ್ರ,ಮಾನು, ಉಚಲ್ಯಾ, ಕುಶಿಯೇಘಮ, ಭೂಮಿಗೆ ವಿದಾಯ, ಸೂಪರ್ ಕ್ಲೋನ, ರಣಾಂಗನಾ, ಸತ್ಯಾಂತರ, ಒಂದೊಂದೇ ಎಲೆ ಉದುರಿದಾಗ ಅಂತ ನಿನ್ನ ಪ್ರೀತಿಯ ರೀತಿ, ಸಾನಿಯಾ ಕಥೆಗಳು, ಸ್ವಪದ, ಟೀಕಾ , ಸ್ವಯಂವರ, ಮಹಾನಾಯಕ, ಪಾನಿಪತ್, ಪಾಂಗಿರಾ, ಶ್ರೀವಿಠಲ, ಒಂದು ಮಹಾಸಮನ್ವಯ, ಹೇ ಈಶ್ವರರಾವ್, ಹೇ ಪುರುಕ್ಷೇತ್ರಮರಾವ್, ಬಸವೇಶ್ವರ - ಜ್ಞಾನೇಶ್ವರ ಒಂದು ಚಿಂತನೆ ಮುಂತಾದ ಅತ್ಯಮೂಲ್ಯ ಕೃತಿಗಳನ್ನು ಈ ಸಾಹಿತ್ಯ ಲೋಕಕ್ಕೆ ಅನುವಾದನೆಯ ಮುಖಾಂತರ ಒದಗಿಸಿದ ಕೀರ್ತಿ ಶ್ರೀ ಚಂದ್ರಕಾಂತ ಪೋಕಳೆಯವರಿಗೆ ಸಲ್ಲುತ್ತದೆ. ತಮ್ಮ ಈ ಮಹಾನ ಕೃತಿಗಳ ರಚನೆಯಿಂದ ಸಾಹಿತ್ಯ ಲೋಕದಲ್ಲಿಯೇ ಚಿಕ್ಕೋಡಿ ತಾಲೂಕಿಗೆ ಒಂದು ವಿಶಿಷ್ಠ ಸ್ಥಾನವನ್ನು ಕಲ್ಪಿಸಿ ಕೊಡುವಲ್ಲಿ ಶ್ರೀಯುತರು ಶ್ರಮ ಶ್ಲಾಘನೀಯ ಎಂದು ಹೇಳಬಹುದು.

ಬೆಡಕಿಹಾಳದ ಮತ್ತೋರ್ವ ಸಾಹಿತಿಯಾದ ಶ್ರೀಮತಿ ಉಮಾ ಕುಲಕರ್ಣಿಯವರು ಶಿವರಾಂ ಕಾರಂತ ಹಾಗೂ ಎಸ್. ಎಲ್. ಭೈರಪ್ಪನವರ ಎಲ್ಲಾ ಕಾದಂಬರಿಗಳನ್ನು ಮತ್ತು ಪೂರ್ಣ ಚಂದ್ರ ತೇಜಸ್ವಿಯವರ ಕರ್ವಾಲೋ, ಗಿರೀಶ ಕಾರ್ನಾಡರ ನಾಗಮಂಡಲ, ಯು. ಆರ್. ಅನಂತ ಮೂರ್ತಿಯವರ "ಅವಸ್ಥೆ" ಮುಂತಾದ ಕಾದಂಬರಿಗಳನ್ನು ಮರಾಠಿಗೆ ಭಾಷಾಂತರಿಸುವದರೊಂದಿಗೆ ಕನ್ನಡದ ಮೇರು ಕೃತಿಗಳನ್ನು ಅನ್ಯ ಭಾಷಿಕರು ಅಭ್ಯಸಿಸಲು ಅನುಕೂಲ ಮಾಡಿಕೊಟ್ಟರು. ಬೆಡಕಿಹಾಳದವರೆ ಆದ ಮತ್ತೊಬ್ಬ ವಿದ್ವಾಂಸ ಶ್ರೀ. ಪಾ. ನಾ. ಕುಲಕರ್ಣಿಯವರು "ಶ್ರೀ ಜ್ಞಾನೇಶ್ವರಿ" ಎಂಬ ಕೃತಿಯನ್ನು ಸಂಪಾದಿಸಿದರು. ಈ ಬೆಡಕಿಹಾಳದ ತ್ರಿಮೂರ್ತಿ ಬರಹಗಾರರು ಚಿಕ್ಕೋಡಿ ತಾಲೂಕಿನ ಸಾಹಿತ್ಯ ರಂಗದಲ್ಲಿ

ಬೆಡಕಿಹಾಳ ಪ್ರದೇಶವು ಸದಾ ಹಸಿರಾಗಿರುವಂತೆ ನೋಡಿಕೊಂಡಿದ್ದಾರೆ.

ಚಿಕ್ಕೋಡಿ ತಾಲೂಕಿನ ಕೆರೂರು ಗ್ರಾಮದಲ್ಲಿ ಜನ್ಮತಳೆದು ತಮ್ಮ ಪಬಂಧ ಬರವಣಿಗೆಗಳ ಮೂಲಕ ಪ್ರಸಿದ್ಧರಾಗಿರುವ ದಿ.ಬ.ಕೇರೂರರು ಯಕ್ಸಂಬಾದಲ್ಲಿ ಜನಿಸಿ ಮರಾಠಿ ಭಾಷೆಯಲ್ಲಿ ಖ್ಯಾತಿಯನ್ನು ಪಡೆದಿರುವ ಪ್ರೋ. ಬಿ. ಎ. ಕುಲಕರ್ಣಿಯವರು ಸಾಂಜಶಕುನ ಹಿರವೆರಾವೆ, ಇತ್ಯಾದಿ ಕಥಾ ಸಂಕಲನಗಳ ಮೂಲಕ ತಮ್ಮನ್ನು ಗುರುತಿಸಿ ಕೊಂಡಿದ್ದಾರೆ. ಅದೇ ರೀತಿ ಕೊಗನೊಳ್ಳಿಯ ಗಿರಸುತರು ಮರಾಠಿಯಲ್ಲಿ 'ಪಾಂಡವ ಪುರಾಣ' ರಚಿಸಿದ್ದಾರೆ. ನಿಪ್ಪಾಣಿಯ ಮಹಾದೇವ ಮೋರೆಯವರು ತಮ್ಮ ಕಥೆಗಳಲ್ಲಿ ಗಮನ ಸೆಳೆದಿದ್ದನ್ನು ಕಾಣಬಹುದು. ನಿಪ್ಪಾಣಿ ಪ್ರದೇಶದಲ್ಲಿ ಸಮರ್ಥವಾದ ಸಾಹಿತ್ಯ ಕೃಷಿಯನ್ನು ಕೈಗೊಂಡ ಮಹಾನ ವ್ಯಕ್ತಿಗಳಲ್ಲಿ ಮಹಾದೇವ ಮೋರೆಯವರು ಒಬ್ಬರು. ನಿಪ್ಪಾಣಿಯ ಒಂದು ಸಾಮಾನ್ಯ ಕುಟುಂಬದಲ್ಲಿ ಮೋರೆಯವರು ಅಗಸ್ಟ ೨೨ ೧೯೩೯ ರಲ್ಲಿ ಜನಿಸಿದರು. ಇವರ ಆರಂಭಿಕ ಜೀವನ ತೀರಾ ಕಷ್ಟದಿಂದ ಕೂಡಿತ್ತು. ೧೯೬೦ರ ನಂತರದಲ್ಲಿ ಮರಾಠಿ ಕಥನಕಾರರು ಉತ್ಸಾಹದಿಂದ ಕಥೆಗಳನ್ನು ರಚಿಸಲು ಪ್ರಾರಂಭಿಸಿದರು.ಈ ಕಥಾಕಾರರ ಗುಂಪಿನಲ್ಲಿ ಮೋರೆಯವರ ಹೆಸರು ಮೊದಲನೆಯದಾಗಿ ಮೂಡಿ ಬಂದಿತು. ಇವರ ಸಾಹಿತ್ಯವು ಬಡತನ ರೇಖೆಗಿಂತ ಕೆಳಗಿರುವವರ ಬಗ್ಗೆ ಚಿಂತನೆ ನಡೆಯಿಸಿ ಇವರ ಕೃತಿಯಾದ 'ಜಾಂಬಡ' ಎಂಬ ಕಾದಂಬರಿಗೆ ಪುರಸ್ಕಾರ ದೊರೆತಿದೆ. ಇವರು ೧೯೭೩ ರಲ್ಲಿ ರಚಿಸಿದ "ಧರ ಅಬಾಳ ಖಾಲಿ ಧರತಿ" ಎಂಬ ಕಾದಂಬರಿಯಲ್ಲಿ ಇವರ ಸಮಾಜದ ಕೆಳವರ್ಗದ ಮಹಿಳೆಯರ ಬಗ್ಗೆ ಚಿಂತನೆ ಮಾಡಿದ್ದಾರೆ."[೩] ಅದೇ ರೀತಿ ಮೋರೆಯವರು ಮರಾಠಿಯಲ್ಲಿ ದಲಿತರ ಜೀವನ ಶೈಲಿಯ ಬಗ್ಗೆ ವಿವರಣೆಯನ್ನು ನೀಡುತ್ತಾ ಸಮಾಜದಲ್ಲಿ ದಲಿತರ ಸ್ಥಾನಮಾನದ ಬಗ್ಗೆ ವಿವರಿಸಿದ್ದಾರೆ.

ನಿಪ್ಪಾಣಿಯ ಇನ್ನೋರ್ವ ಕವಿಯಾದ ಬಾಳಕೃಷ್ಣರು ತಮ್ಮ ಲೇಖನಗಳಲ್ಲಿ ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯದ ನಂತರದ ಕಾಲದ ಚಿತ್ರಣವನ್ನು ಬಿಂಬಿಸುತ್ತಾ ಸ್ವಾತಂತ್ರ್ಯದ ನಂತರ ಗಾಂಧೀಜಿಯವರ ಕೊಲೆಯ ಬಗ್ಗೆ ತಮ್ಮ ಕೃತಿಯಲ್ಲಿ ವಿವರಣೆ ನೀಡಿದ್ದಾರೆ. ಇವರು ತಮ್ಮ ಮನೆಯಲ್ಲಿಯೇ ಹರಿದಾಸ ಶಾಲೆಯನ್ನು ಪ್ರಾರಂಭಿಸಿ ಹಲವರ ಶಿಷ್ಯವೃಂದವನ್ನು ಹೊಂದಿದವರಾದ ಇವರು ಮರಾಠಿ ಭಾಷೆಯ ಬರವಣಿಗೆಗಳಿಗೆ ಜೀವ ಕಳೆ ತುಂಬಿದ್ದಾರೆ.

ನಿಪ್ಪಾ ಣಿ ವಿಭಾಗದ ಮತ್ತೊಬ್ಬ ಬರಹಗಾರ ಎಂದರೆ ಡಾ॥ ಗಣಪತ ಬಾರವಾಡೆ ಇವರು ತಮ್ಮ ಕತೆಗಳಲ್ಲಿ ಮಧ್ಯಮ ಮರ್ಗದವರ ಜೀವನದ ಬಗ್ಗೆ ಚಿತ್ರಣವನ್ನು ನೀಡಿದ್ದಾರೆ. ಇವರು ರಚಿಸಿದ 'ಕಮಾನ' ಮತ್ತು 'ಚಂಡಿಬಾಂಗ' ಎಂಬ ಎರಡು ಮರಾಠಿ ಕಥಾ

ಸಂಗ್ರಹ ಹಾಗೂ 'ತ್ರಿಶುಲ' ಎಂಬ ಕಾದಂಬರಿ ಪ್ರಸಿದ್ಧಿ ಪಡೆದಿದೆ. ಆಕಾಶವಾಣಿ ಕೇಂದ್ರಗಳು ಇವರು ರಚಿಸಿದ ನಾಟಕಗಳನ್ನು ಬಿತ್ತರಿಸಿವೆ. ಇವರ ನಂತರದ ಬರಹಗಾರರೆಂದರೆ ಸಣ್ಣ ಮಕ್ಕಳ ಬಗ್ಗೆ ಅಂದರೆ ಸಾಮಾಜಿಕ ಸಂಸ್ಕಾರಗಳನ್ನು ಬಿಂಬಿಸುವ ಮಕ್ಕಳಿಗೆ ತಟ್ಟನೆ ಮನಸ್ಸಿನ ಮೇಲೆ ಪರಿನಾಮ ಬೀರುವಂತಹ ಚಿಕ್ಕಮಕ್ಕಳ ಚಾತುರ್ಯದ ಬೆಳವಣಿಗೆ ಉಂಟಾಗುವಂತೆ ಬಾಲಕಥನಗಳನ್ನು ಬರೆದರು. ಇವರ ಪುಸ್ತಕಗಳಲ್ಲಿ ಪ್ರಮುಖವಾದವುಗಳೆಂದರೆ "ಅಪಲಾಹಂತ ಜಗನಾಥ" "ಶೀಲ ವಿಜಯ" ವೈಶಾಕೆ ಪತಿವೃತಾ ಮುಂತಾದ ೨೧ ಪುಸ್ತಕಗಳನ್ನು ಕಾದಂಬರಿಗಳನ್ನು ರಚಿಸಿದ್ದಾರೆ.

ಶ್ರೀಮತಿ ಕುಸುಮಾ ತಿಳವೆಯವರು ಮಹಾರಾಷ್ಟ್ರ ರಾಜ್ಯದ ಸಾಹಿತ್ಯ ಮತ್ತು ಸಂಸ್ಕೃತ ಮಂಡಳಿಯ ಅನುದಾನದಿಂದಿವರು ಮರಾಠಿ ಭಾಷೆಯಲ್ಲಿ 'ನಿಶಿಗಂದಾ' ಎಂಬ ಕೃತಿಯನ್ನು ರಚಿಸಿದ್ದು ಈ ಕೃತಿಯು ಪಸಿದ್ಧವಾಗಿದೆ. ನಿಪ್ಪಾಣಿಯ ಮ. ಅ. ಬಾಡಿಲಕರರು ಕರ್ನಾಟಕದ ಹಾಗೂ ಮಹಾರಾಷ್ಟ್ರದ ದಿನಪತ್ರಿಕೆಯ ಪುರವಣಿಯಲ್ಲಿ (ಬಾಲ ಕಥಾ) ಎಂಬ ಲೇಖನವನ್ನುಬರೆದಿದ್ದಾರೆ. 'ಸಲಿಂ ಶೇಖ' ಎಂಬ ಮತ್ತೊರ್ವ ಬರಹಗಾರ ಮಹಾರಾಷ್ಟ್ರ ರಾಜ್ಯದ ಸಾಹಿತ್ಯ ಹಾಗೂ ಸಂಸ್ಕೃತಿಯ ಅನುದಾನದಿಂದ "ವಳವಾಚಾ ಪಾವುಸ" ಕಥಾ ಸಂಗ್ರಹವನ್ನು ಮರಾಠಿ ಭಾಷೆಯಲ್ಲಿ ರಚಿಸಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಇವರ ಈ ಕಥಾ ಸಂಗ್ರಹಕ್ಕೆ ಮರಾಠಿ ಸಾಹಿತ್ಯ ಪುರಸ್ಕಾರ ಸಿಕ್ಕಿದೆ.

ನಿಪ್ಪಾಣಿಯ ದೇವಚಂದ ಕಾಲೇಜಿನ ಪ್ರಾಧ್ಯಾಪಕರಾದ ಶ್ರೀ ಕಾಳಿದಾಸ ಶಂಕರ ರಾಯಬಾಗಿಯವರು ಕನ್ನಡ ಭಾಷೆಯ ಸಾಹಿತಿಗಳು ಆಗಿದ್ದಾರೆ. ಇವರ 'ಕಾವ್ಯಗಂಧ' ಎಂಬ ಕಾವ್ಯ ಸಂಗ್ರಹಕ್ಕೆ 'ಕಾವ್ಯಯಾತ್ರಿ' ಪುರಸ್ಕಾರ ದೊರೆತಿದೆ. ಇವರು ಅನುಪ್ರಿಯ ಎಂಬ ಕಾವ್ಯನಾಮದಿಂದ ಕರೆಯಿಸಿ ಕೊಂಡಿದ್ದಾರೆ. ನಿಪ್ಪಾಣಿ ಪ್ರದೇಶದ ಮತ್ತೊಬ್ಬ ಕವಿಯಿತ್ರಿಯೆಂದರೆ ಪ್ರೊ. ಗೌರಾವತಿ ಬರಾಡೆ/ಬೋಸಲೆಯವರು ಇವರು ಒಬ್ಬ ಸಾಮಾಜಿಕ ಕಾರ್ಯಕರ್ತರು. ಇವರ "ಪಾನೆ ಪಾನಿ" ವಿರಾಣಿ ಎಂಬ ಕವಿತಾ ಸಂಗ್ರಹವನ್ನು ರಚಿಸಿ ಮರಾಠಿ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಸೇವೆ ಸಲ್ಲಿಸಿದ್ದಾರೆ. ಇದೇ ಪ್ರದೇಶದ ಪ್ರೊ. ಅಚ್ಯುತ ಮಾನೆಯವರು ತಮ್ಮ ಲೇಖನಗಳ ಮುಖಾಂತರ ಸಾಮಾಜಿಕ ಶೋಷಣೆಯ ಬಗ್ಗೆ ಹಲವಾರು ಲೇಖನಗಳನ್ನು ವೃತ್ತ ಪತ್ರಿಕೆಗಳಲ್ಲಿ ಪ್ರಕಟಿಸಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಮರಾಠಿ ಸಾಹಿತ್ಯದ ಪುರಸ್ಕಾರಗಳನ್ನು ಇವರು ಪಡೆದುಕೊಂಡಿದ್ದಾರೆ. ಕರ್ನಾಟಕದವರಾದ ಇವರೆಲ್ಲ ಮರಾಠಿ ಭಾಷೆಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

ನಿಪ್ಪಾಣಿ ಪ್ರದೇಶದ ಓದುಗರಿಗೆ ದಿನ ನಿತ್ಯ ಪತ್ರಿಕೆಗಳಿಗೆ ಸುದ್ದಿ ತಲುಪಿಸುವ ನಿಪ್ಪಾಣಿ ಪ್ರದೇಶದ ಘುಡಾರಿ ಪತ್ರಿಕೆಯ ಪ್ರತಿನಿಧಿ ಎಂದೇ ಪ್ರಸಿದ್ದಿಯನ್ನು ಪಡೆದ ಮನೋಹರ ಬನ್ನೆಯವರುಕವಿಯಾಗಿ ಸಮೀಕ್ಷಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಇವರ

"ಉರುಸ" ಕಥಾ ಸಂಗ್ರಹ ಪ್ರಸಿದ್ಧಿಯನ್ನು ಪಡೆದಿದೆ. ಇವರ ಆಶ್ರಾಮ ಮತ್ತು ಪ್ರತಿದ್ವಂದ್ವ ಎರಡು ಕಾದಂಬರಿ, ಪಕ್ತ ಏಕ ಶೂನ್ಯ ಈ ನಾಟಕವು ೧೯೮೫ ರಲ್ಲಿ ಈ ಪ್ರದೇಶದಲ್ಲಿ ನಡೆದ ತಂಬಾಕು ಅಂದೋಲನದ ಮೇಲೆ ತನ್ನ ಬೆಳಕು ಬೀರುತ್ತದೆ. ಇವರು ೧೯೭೦ ರಿಂದ ೧೯೮೦ ರ ಮಧ್ಯದ ದಶಕದಲ್ಲಿ ಹಲವಾರು ಕವಿತೆಗಳನ್ನುರಚಿಸಿದರು. ಮನೋಹರ ಬನ್ನೆಯವರು ಸುಮಾರು ೨೫ ವರ್ಷಕ್ಕಿಂತ ಹೆಚ್ಚು ಕಾಲ ಪತ್ರಿಕಾ ರಂಗದಲ್ಲಿ ಕಾರ್ಯ ನಿರ್ವಹಿಸಿದ್ದಾಋಎ. ಇವರು ತಮ್ಮ ಜೀವಮಾನದ ಸಾಧನೆಗೆ ಹಲವಾರು ಪುರಸ್ಕಾರಗಳನ್ನು ತಮ್ಮದಾಗಿಸಿಕೊಂಡಿದ್ದು ಇವರು ನಿರಂತರ ಶ್ರಮದಿಂದ ಕರ್ನಾಟಕದ ಕನ್ನಡ ಸಾಹಿತ್ಯ ಹಾಗೂ ಮರಾಠಿ ಸಾಹಿತ್ಯದ ಸಾಮರಸ್ಯಕ್ಕೆ ಒಂದು ಬೆಸುಗೆಯನ್ನು ಕಲ್ಪಿಸಿದ್ದಾರೆ. ಈ ರೀತಿಯಾಗಿ ನಿಪ್ಪಾಣಿಯು ಚಿಕ್ಕೋಡಿ ತಾಲೂಕಿನ ಗಡಿ ಭಾಗದ ಹೋಬಳಿಯಾಗಿದ್ದರು. ಕನ್ನಡ ಮತ್ತು ಮರಾಠಿ ಸಾರಸ್ವತ್ವಲೋಕಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದೆ.

ಚಿಕ್ಕೋಡಿ ನಗರದಲ್ಲಿಯೇ ನೆಲೆ ನಿಂತು ಯುವ ಜನತೆಗೆ ಪ್ರೇರಕ ಶಕ್ತಿಯಾಗಿ ನಿಂತ ಪ್ರೊ. ಎಸ್. ವೈ. ಹಂಜಿಯವರ ಸಾಹಿತ್ಯಕೃಷಿ ಹುಬ್ಬೇರಿಸುವಂತಹದು ಆಗಿದೆ. ಇವರು ಅಪ್ಪಣ್ಣಗೌಡ ಪಾಟೀಲ, ಚಿದಾನಂದ ಕೋರೆ, ಬಸವಪ್ರಭು ಕೋರೆ, ಪಿ.ಬಿ.ಪಾಟೀಲ, ಆರ್. ಎಮ್. ಪಾಟೀಲ ಮುಂತಾದವರ ಕುರಿತಾದ ಜೀವನ ಚರಿತ್ರೆಗಳನ್ನು ಬರೆದು ಅವುಗಳನ್ನು ಚಾರಿತ್ರಿಕ ದಾಖಲೆಗಳಲ್ಲಿ ದಾಖಲಿಸಿದ್ದಾರೆ. ಇವರು ಕಾವ್ಯ ಕೃಷಿಯಲ್ಲೂ ತಮ್ಮನ್ನು ತೊಡಗಿಸಿಕೊಂಡರು. ಇವರು "ಹಳೆಬೇರು – ಹೊಸ ಚಿಗುರು" ಹಾಗೂ "ಬಾನುಲಿ" ಎಂಬ ಸಂಕಲನ ಪ್ರಕಟಿಸಿದ್ದಾರೆ. ಅದೇ ರೀತಿ "ಶಿವಶರಣರ ದೃಷ್ಟಿಯಲ್ಲಿ ಸ್ತ್ರೀ" ಎಂಬ ಶ್ರೀಯುತರ ಕೃತಿ ಐದು ಬಾರಿ ಮರು ಮುದ್ರಣ ಪಡೆದುಕೊಂಡು ಜನಪ್ರಿಯ ಕೃತಿಯಾಯಿತು. ಇವರು ಚಿಕ್ಕೋಡಿಯಲ್ಲಿ 'ಪ್ರಭು ಪ್ರಸಾದ' ಎಂಬ ಪತ್ರಿಕೆಯನ್ನು ಹುಟ್ಟುಹಾಕಿ ಹಲವಾರು ಬರಹಗಾರರನ್ನು ಬೆಳೆಯಿಸಿದ ಕೀರ್ತಿ ಶ್ರೀಯುತರಾದ ಎಸ್. ವೈ. ಹಂಜಿಯವರಿಗೆ ಸಲ್ಲುತ್ತದೆ. ಇವರೇ ಸಂಪಾದಿಸಿದ 'ಸೀಮೆ ' ಕವಿತೆಗಳು ಐದು ಜನ ಕವಿಗಳ ವಿಶಿಷ್ಟ ಸಂಕಲನವಾಗಿದೆ.

ಹಿರಿಯ ವ್ಯಕ್ತಿ ಹಾಗೂ ಅನುಭವಿಕ ಕವಿ ಶ್ರೀ ಶಿವಲಿಂಗಪ್ಪ ಕುಂಬಾರರು ಚಿಕ್ಕೋಡಿ ತಾಲೂಕಿನ ಕಬ್ಬೂರಿನವರು. ಶರಣ ಜೀವನದೊಂದಗಿನ ಇವರ ಸರಳ ಹಾಗೂ ಸಾತ್ವಿಕ ಜೀವನವು ಶ್ರೀಯುತರ ಸಾಹಿತ್ಯ ಶ್ರೀಮಂತಿಕೆಯ ಮುನ್ಸೂಚನೆಯಾಗಿವೆ. ಶ್ರೀಯುತರು ಕವನ ಸಂಕಲನಕಾರರು ಹಾಗೂ ಗೀತ ರಚರಾಕಾರರು ಆಗಿದ್ದಾರೆ. ಇವರು ರಚಿಸಿದ 'ಅನುಭವೋಕ್ತಿ' ಎಂಬ ಗೀತ ಸಂಗ್ರಹಣೆ ಹಾಗೂ 'ಗುಲಾಬಿ' ಎಂಬ ಕವನ ಸಂಕಲನಗಳು ಜನರ ಗಮನ ಸೆಳೆದಿವೆ. ಇದೇ ಊರಿನವರಾದ ಮತ್ತೊಬ್ಬ ಕಾವ್ಯ ರಚನೆಕಾರರೆಂದರೆ ಪ್ರೊ. ಸಿ.ಬಿ.ಕುಲಗುಡೆಯವರು ಇವರ ಅದ್ಬುತ ಕಾವ್ಯ ಪ್ರತಿಭೆ ಕನ್ನಡ

– ಇಂಗ್ಲೀಷ ಭಾಷೆಗಳಲ್ಲಿ ಅರಳು ಹುರಿದಂತೆ ಮಾತನಾಡುವುದು ಕವನಗಳನ್ನು ರಚಿಸುವುದು ಮತ್ತು ತಮ್ಮಿಂದ ರಚಿತವಾದ ಕವನಗಳನ್ನು ಪಟಪಟನೆ ಮುತ್ತುಗಳು ಉದುರಿದಂತೆ ಹೇಳುವವರಾಗಿದ್ದಾರೆ. ಇವರು ಮರಡಿಮಠದ ಕಾಡಸಿದ್ದೇಶ್ವರರನ್ನು, ಮುಗಳಖೋಡದ ಮಹಾಮಹಿಮರನ್ನು , ಹುಣಸಿಕೊಳ್ಳ ಮಠದ ಕುರಿತು ರಚಿಸಿದ ಸುಪ್ರಭಾತ ಗೀತೆಗಳು ಧ್ವನಿಸುರಳಿಗಳಾಗಿವೆ. ಅಲ್ಲದೆ ಭಕ್ತರ ಮನವನ್ನು ತಣಿಸಿವೆ. 'ನುಡಿಹಾಡಲೆ ನಿಮ್ಮ ವಚನಗಳು ಎಂಬ ಸಂಗೀತ ರೂಪಕ , ಕಲಿಂಗ ವಿಜಯ, ಅಡ್ನಾಡಿ ರೋಗಿಗೆ ಅಡ್ನಾಡಿ ಡಾಕ್ಟರ , ಬಾಸಿಂಗಬಲ, ಮುಂತಾದ ನಾಟಕಗಳನ್ನು ಶಿವನ ಬೊಂಬೆಯ ಹಾಡುಗಳು, ಋತುಗಾನ, ನಾಲಿಗೆಯು ನಲಿಯಿತು, ಎಚ್ಚೆತ್ತ ಭಾರತ, ಮುಂತಾದ ಕೃತಿಗಳನ್ನು ರಚಿಸಿದರು. ಇವರ ಕೆಲವು ಕೃತಿಗಳು ಮುದ್ರಣಕ್ಕಾಗಿ ಕಾಯುತ್ತಿವೆ. ಇಂಗ್ಲೀಷ ಗೀತೆಗಳನ್ನು ಕನ್ನಡದಲ್ಲಿ ಇವರು ಸುಶ್ರಾವ್ಯವಾಗಿ ಹೇಳಬಲ್ಲ ಬಹುಭಾಷಾ ಪಂಡಿತರಾಗಿದ್ದಾರೆ. ಶ್ರೀ. ಸಿ.ಬಿ. ಕುಲಗೂಡೆಯವರು ಚಿಕ್ಕೋಡಿ ತಾಲೂಕಿನ ಸಾಹಿತ್ಯದ ವಿವಿಧ ರಂಗಗಳಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

ಪ್ರಸ್ತುತ ಬೆಳಗಾವಿ ವಾಸಿಗಳಾದ ಶ್ರೀ ಅನಂತ ಕಲ್ಲೋಳರವರು ಸಹ ಚಿಕ್ಕೋಡಿ ತಾಲೂಕಿನ ಕಬ್ಬೂರಿನವರೆ, ಇವರು ಹಾಸ್ಯ ಸಾಹಿತ್ಯದಲ್ಲಿ ಮನೆಮಾತಾಗಿದ್ದಾರೆ. ಬಾಗೇವಾಡಿ ಮಲ್ಲಪ್ಪನವರ ಚಿಕ್ಕ ಚರಿತ್ರೆಯನ್ನು ರಚಿಸಿ ಸಾಹಿತ್ಯ ರಂಗಕ್ಕೆ ಹೆಜ್ಜೆ ಹಾಕಿದ ಮಹಾದೇವ ಕುಂಬಾರರು ಚಿಕ್ಕೋಡಿ ತಾಲೂಕಿನವರೇ ಆಗಿದ್ದಾರೆ. ಮೂಲತಃ ಕಬ್ಬೂರಿನವರಾದ ಶ್ರೀಪಾದ ಕುಂಬಾರರು ಹನಿಗವನ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು ಇವರು ಖಡಕಲಾಟದ ಶ್ರೀ ಹರಿದಾಸರ ಸಂಕ್ಷಿಪ್ತ ಜೀವನ ಚಿತ್ರಣವನ್ನು ನೀಡಿದ ಇವರು 'ವಚನ ಜ್ಯೋತಿ' ಎಂಬ ಕೃತಿಯನ್ನು ಸಂಪಾದನೆ ಮಾಡಿದ್ದಾರೆ. ಕನ್ನಡ ವ್ಯಾಕರಣ, ನಾಟಕ, ಕಾವ್ಯ, ಲೇಖನ ರಚನೆಯಲ್ಲಿ ಇವರಿಗೆ ವಿಶೇಷ ಆಸಕ್ತಿ ಇದೆ. ಇವರು ಕೆಲವೊಂದು ನಾಟಕಗಳನ್ನು ರಚಿಸಿದ್ದಾರೆ. ಇತ್ತೀಚಿನ ಇವರ ಕೃತಿ "ಭಾವಬಿಂದು" ಎಂಬುದು ವಿಶಿಷ್ಟ ಹನಿಗವನ ಸಂಕಲನವಾಗಿದೆ.

ಶ್ರೀ ಧರಿಗೌಡ ಪಾಟೀಲರು ಚಿಕ್ಕೋಡಿ ತಾಲೂಕಿನ ಕೆರೂರಿನವರು ಇವರು "ತಾರುಣ್ಯ ಮಾಡಿದ ತಪ್ಪು" "ಕೈಗೆ ನಿಲುಕದ ಹೂ" "ಶೀಲಗೆಟ್ಟರೂ ಸೂಳೆಯಲ್ಲ" "ಅಧಿಕಾರ ದಾಹ" , ಹೇಳಿ ಮೇಡಿಸಿದ ಹುಚ್ಚ, ವಿಧವೆಯ ವಿಧಿ, ಒರೆಗೆ ಹಚ್ಚಿದ ಬಂಗಾರ, ಮುಂತಾದ ಬೆಲೆಯುಳ್ಳ ನಾಟಕಗಳನ್ನು ರಚಿಸಿದ್ದಾರೆ. 'ಮಂದಾಕಿನಿ' ಎಂಬ ಕಥಾ ಸಂಗ್ರವನ್ನು ರಚಿಸಿರುವ ರಚಿಸಿರುವ ಧರಿಗೌಡ ಪಾಟೀಲರು ಶ್ರೇಷ್ಠ ಸಾಹಿತ್ಯಗಾರರಾಗಿದ್ದಾರೆ. ಇವರ ನಾಟಕಗಳು ಇನ್ನೂ ಮುದ್ರಣಗೊಳ್ಳಬೇಕಾಗಿವೆ. ಇವು ಮುದ್ರಣಗೊಂಡು ನಾಟಕ ರಂಗವನ್ನು ಪ್ರವೇಸಿಸಿದರೆ ನಾಟಕ ರಂಗಕ್ಕೆ ಆಗುವ ಲಾಭ

ಅಷ್ಟಿಷ್ಟಲ್ಲ. ಚಿಕ್ಕೋಡಿ ತಾಲೂಕಿನ ಕೆರೂರ ಗ್ರಾಮದ ಮತ್ತೊಬ್ಬ ತರುಣ ಸಂಶೋಧಕ ಎಂದರೆ ಡಾ॥ ಸಿದ್ದಪ್ಪ ಡಾಲೆಯವರು, ಇವರು "ಎರಿಯುತ್ತಿದೆ ದರೆ" ಎಂಬ ಕವನ ಸಂಕಲನದಿಂದ ಸಾಹಿತ್ಯ ಪ್ರಪಂಚಕ್ಕೆ ಪಾದಾರ್ಪಣೆ ಮಾಡಿದರು. ಇವರು ಎಸ್. ಎಸ್. ಕೋತಿನ ಅವರ ಬರಹಗಳು ಎಂಬ ಪ್ರೌಢ ಪ್ರಬಂಧವನ್ನಾಗಿ ರಚಿಸಿ ಸಾಹಿತ್ಯ ಲೋಕಕ್ಕೆ ಭರವಸೆಯನ್ನು ಮೂಡಿಸಿದ್ದಾರೆ. ಇದೇ ಊರಿನ ವೀರಯೋಧ ಸಿದಗೌಡರ ಕುರಿತು ಕಿರು ಪುಸ್ತಕ ರಚಿಸಿದ ಶ್ರೀ ಪಾಟೀಲರ ಸಾಹಿತ್ಯ. ಸಾಹಿತ್ಯ ಪ್ರಪಂಚಕ್ಕೆ ಇನ್ನೂ ಮುಂದೆ ಹೆಚ್ಚಿನ ಕೃತಿಗಳನ್ನು ನೀಡಬಲ್ಲರು. ಎಂದು ಆಶಯ ವ್ಯಕ್ತಪಡಿಸಲಾಗಿದೆ. ಇದೇ ಗ್ರಾಮದ ಜ್ಯೋತಿಗೌಡಾ ಪಾಟೀಲ ಅವರು ಷಟ್ಪದಿಯಲ್ಲಿ ರಚಿಸಿದ "ಶಂಕರಾನಂದ ಕಾವ್ಯ".

ಚಿಕ್ಕೋಡಿ ತಾಲೂಕಿನ ಬೆಳಕೂಡ ಗ್ರಾಮದವರಾದ ಶ್ರೀ ಶಿವಪ್ಪಾ ಅರಬಾವಿ ಯವರು ವೃತ್ತಿಯಲ್ಲಿ ಎಂಜನೀಯರರಾದರೂ ಇವರು ಸಾಹಿತ್ಯ ಪ್ರೇಮಿ, ಇವರನ್ನು ಸಾಹಿತ್ಯ ರಂಗದಲ್ಲಿ ಗುರುತಿಸುವಂತೆ ಮಾಡಿದೆ. ಇವರು ಹಲವಾರು ಸಾಹಿತ್ಯಿಕ ಕೃತಿಗಳನ್ನು ಚಿಕ್ಕೋಡಿ ತಾಲೂಕಿನ ಸಾಹಿತ್ಯಕ್ಕೆ ನೀಡಿದ್ದಾರೆ. ಶ್ರೀ ಶಿವಪ್ಪಾ ಅರಭಾವಿಯವರು ನಾಟಕ ರಚನೆ ಭಾವ ಸಂಗಮ, ನಂದಾದೀಪ, ಮಧು ಎಂಬ ಕೃತಿಗಳನ್ನು ಸಂಪಾದನೆ ಮಾಡಿದ್ದಾರೆ. ಮಕ್ಕಳಿಗಾಗಿ ಇವರು ಮಿನಿಕನ್ನಡ ವ್ಯಾಕರಣ ಕೃತಿಯನ್ನು ರಚಿಸಿದ್ದಾರೆ.

ಚಿಕ್ಕೋಡಿ ತಾಲೂಕಿನ ಯಕ್ಸಂಬಾ ಗ್ರಾಮ ಗ್ರಾಮದ ಒಬ್ಬ ಶ್ರೇಷ್ಠ ಸಾಹಿತಿ ಡಾ॥ ಅನಿಲ ಕಮತಿಯವರು. ವೈತ್ತಿಯಲ್ಲಿ ವೈದ್ಯರು ಆದರೆ ಕನ್ನಡ ನಾಡು ನುಡಿಯ ಬಗ್ಗೆ ಇವರಿಗಿರುವ ಪ್ರೇಮ ಅಪಾರವಾದುದು. ಡಾ॥ ಅನಿಲ ಕಮಿತಿಯವರು ಕನ್ನಡೋತ್ಸವದ ಮೂಲಕ ಸಮಸ್ತ ಕನ್ನಡಿಗರ ಗಮನ ಸೆಳೆದಿದ್ದಾರೆ. ಇವರ ಕನ್ನಡ ನಾಡ ನುಡಿಯ ಚಿಂತನೆಯ ಫಲವಾಗಿ ಮೂಡಿ ಬಂದಿರುವ "ಗಡಿಯಾಚೆ – ಗಡಿಈಚೆ" ಎಂಬ ಪ್ರಬಂಧ ಸಂಕಲನವು ಗಟ್ಟಿ ಹಾಗೂ ವಿಚಾರ ಪ್ರಚೋದಕ ಲೇಖನಗಳನ್ನುಳಗೊಂಡಿದೆ. ಏಡ್ಸ ರೋಗಿಗಳಿಗಾಗಿ ಮತ್ತು ಅವರ ತಿಳುವಳಿಕೆಗಾಗಿ ಬರೆದ ವೈಧ್ಯರ ಕೃತಿ ತಜ್ಞರ ಗಮನವನ್ನು ಸೆಳೆದಿವೆ. ಇದೇ ರೀತಿ ವೈಧ್ಯ ವೃತ್ತಿಯಲ್ಲಿದ್ದೂ ಸಾಹಿತ್ಯದಲ್ಲಿ ತೊಡಗಿಸಿ ಕೊಂಡವರೆಂದರೆ ಡಾ॥ ದಯಾನಂದ ನೂಲಿಯವರು. ಚಿಕ್ಕೋಡಿಯಲ್ಲಿ ವೈದ್ಯರಾಗಿರುವ ಡಾ॥ ನೂಲಿಯವರು "ನೆಹಲ್" ದಂತಹ ಬೆಲೆಯುಳ್ಳ ಚಾರಿತ್ರಿಕ ಗಟ್ಟಿ ಅಂಶಗಳ ಆಧಾರಿತ ಕಥಾಸಂಕಲನವನ್ನು ಸಿದ್ಧಪಡಿಸಿಕೊಟ್ಟಿರುವ ಇವಂ ವೈದ್ಯಕೀಯ ಲೇಖನಗಳು, ಹಾಸ್ಯ ಪ್ರಬಂಧಗಳು ಈಗಾಗಲೇ ವಿದ್ವತ್ತ ಪತ್ರಿಕೆಗಳಲ್ಲಿ ಪ್ರಸಾರಗೊಂಡಿರುವುದು ತಾಲೂಕಿನ ಸಾಹಿತ್ಯಮಯಕ್ಕೆ ಗೌರವ ತಂದಿದೆ.

ಚಿಕ್ಕೋಡಿ ತಾಲೂಕಿನ ಯುವ ಲೇಖಕರಾದ ಶ್ರೀ ಮಹೇಶ ಕುಮಾರ ಮಗದುಮ್, ಸಂಕಪಾಳ ಮುಂತಾದವರು ಕಥಾ ಪ್ರಪಂಚದಲ್ಲಿ ಭರವಸೆ ಮೂಡಿಸಿದ್ದಾರೆ. ಅದೇ ರೀತಿ ಅಧ್ಯಾತ್ಮಿಕ ಕವನಗಳ ಮೂಲಕ ಗುರುತಿಸಿಕೊಂಡಿರುವ ಶಮನೇವಾಡಿಯ ಶ್ರೀ ಬಿ.

ಎಲ್. ಹಿಪ್ಪರಗಿ ತಮ್ಮ "ಶಿವಯೋಗಿ" ಕೃತಿಯ ಗಟ್ಟಿ ಕವನಗಳ ಮುಖಾಂತರ ಗುರುತಿಸಿಕೊಂಡಿದ್ದಾರೆ. ಪ್ರೊ. ಬಿ. ಪಿ. ನ್ಯಾಮಗೌಡಾ "ಮೂಕಮಾಟಿ" ನಕೃತಿಯ ಕನ್ನಡ ಅನುವಾದ, ಮಹಾಬಲಮನಿ ಹಾಗೂ ಛಾಯಸಾಗರಮುಯನಿಗಳ ಕುರಿತು ಕೃತಿಗಳು ವಿದ್ವಂಸರ ಗಮನ ಸೆಳೆದಿವೆ. ಪ್ರೊ. ವಿಜಯ ಜೋರೆ, ಸಂಜಯ ಮಾನೆ , ಪ್ರೊ. ಎಮ್. ಬಿ. ಉಪಾಧ್ಯೆ ಪ್ರೋ. ಶ್ರೀಮತಿ ಜಯಶ್ರೀ ನಾಗರಳ್ಳಿ, ಶ್ರೀಮತಿ. ವಿಜಯಲಕ್ಷ್ಮಿ ಹಂಜಿ ಯವರ "ನಾಲ್ಕೇ ನಾಲ್ಕು ಕಥೆಗಳು" ಮುಂತಾದವರ ಅಪ್ರಕಟಿತ ಸಾಹಿತ್ಯವು ಪ್ರಕಟಗೊಂಡರೆ ಚಿಕ್ಕೋಡಿ ತಾಲೂಕಿಗೆ ಹೆಚ್ಚಿನ ಸಾಹಿತ್ಯಿಕ ಕಳೆ ಬರಬಹುದು. ಶ್ರೀಮತಿ ಕಲಾವತಿ ಕವಟಗಿಮಠರವರು ಸ್ತ್ರೀಪರ ಚಿಂತನೆ ಮಾಡುವವರಾಗಿದ್ದಾರೆ. ಇಂಥವರ ಸಾಹಿತ್ಯವು ಸಹ ಬೆಳಗಿಕಿಗೆ ಬರಬೇಕಾದ ಅವಶ್ಯಕತೆಯಿದ್ದು, ಅವು ಹೊರಬಂದರೆ ಈಗಿನ ಸಾಹಿತ್ಯಕ್ಕೆ ಮತ್ತಷ್ಟು ಮೆರಗು ಬಂದಂತಾಗುತ್ತದೆ. ಚಿಂಚಣಿಯ ಸುಮಿತ್ರಾ ಕುಂಬಾರವರು ಸಾಹಿತ್ಯ ಕ್ಷೇತ್ರದಲ್ಲಿ ವಲೆಮರೆಯ ಕಾಯಿಯಂತಿದ್ದಾರೆ. ಇವರು ಒಟ್ಟಾರೆ ಸಾಹಿತ್ಯ ಕ್ಷೇತ್ರದಲ್ಲಿ ಕೇವಲ ಎರಡು ಕೃತಿಗಳು ಬೆಳಕು ಕಂಡಿವೆ. ಉಳಿದವು ಪ್ರಕಟಣೆಗೆ ಸಿದ್ದವಾಗಿವೆ. ಇವರ ಕೃತಿಗಳು ಪ್ರಕಟನೆಯಾದರೆ ಚಿಕ್ಕೋಡಿ ತಾಲೂಕಿನ ಸ್ತ್ರೀ ರಂಗಕ್ಕೆ ಮತ್ತಷ್ಟು ಮೆರಗು ಸಿಗುವಲ್ಲಿ ಸಂಶಯವಿಲ್ಲ.

ಸದಲಗಾದ ದಿಗಂಬರ ಜೈನ ಮುನಿಯಾದ ವಿದ್ಯಾಸಾಗರರು ಹಿಂದಿ ಭಾಷೆಯಲ್ಲಿ ರಚಿಸಿದ "ಮೂಕಮಾಟಿ" ಎಂಬ ಕೃತಿ ಅತ್ಯಂತ ಬೆಳೆಯುಳ್ಳ ಸಾಹಿತ್ಯ ಕೃತಿಯಾಗಿದೆ. ಇವರು ಸಹ ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ಕಾಣಿಕೆಯನ್ನು ನಾವು ಇಲ್ಲಿ ನೆನೆಯಲೆಬೇಕು.

ಗಡಿನಾಡಿನ ಗಡಿಯ ಗುಡಿಗೆ ಚಿನ್ನದ ಕಳಸವನ್ನು ತೊಡಿಸಿರುವ ಚಿಂಚಣಿಯ ಅಲ್ಲಮಪ್ರಭು ಸಿದ್ಧ ಸಂಸ್ಥಾನ ಮಠದ ಶ್ರೀ ಪೂಜ್ಯ ಅಲ್ಲಮ ಪ್ರಭುದೇವ ಮಹಾ ಸ್ವಾಮಿಗಳಂತೂ ಕನ್ನಡದ ಸ್ವಾಮಿಗಳೆಂದೆ ಹೆಸರುವಾಸಿ ಆಗಿದ್ದಾರೆ. ಕನ್ನಡದ ನೆಲ - ಜಲ-ನುಡಿಯ ರಕ್ಷಣೆಯ ಗುರುತರ ಜವಾಭ್ದಾರಿಯನ್ನು ಹೊಂದಿರುವ ಈ ಮಠದ ಸ್ವಾಮಿಗಳು ಪರಿಸರ ಸ್ನೇಹಿಂಯಾಗಿ ಪರಸರದ ರಕ್ಷಣೆಂಯುಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಹೀಗಾಗಿಯೇ ಪರಿಸರದ ಕುರಿತಾದ ಅವರ ಲೇಖನಗಳು - ಚಿಂತನೆಗಳು , ಜನರ ಮತ್ತು ವಿಚಾರವಾದಿಗಳ ಗಮನ ಸೆಳೆದಿವೆ. ಮಠದ ಶ್ರೀಗಳು ತಮ್ಮ ಆರಾಧ್ಯ ದೇವರ ಹೆಸರಿನಲ್ಲಿ "ಅಲ್ಲಮ ಪ್ರಭು ಜನಕಲ್ಯಾಣ ಸಂಸ್ಥೆ" ಯನ್ನು ಕಟ್ಟಿಕೊಂಡು ಇಲ್ಲಿಯ ವರೆಗೆ ಈ ಸಂಸ್ಥೆಯ ವತಿಯಿಂದ ಒಟ್ಟು ಇಪ್ಪತ್ತಾರು ಕೃತಿಗಳನ್ನು ಪ್ರಕಟಿಸಿ ಸಾಹಿತ್ಯ ಲೋಕಕ್ಕೆ ಕೊಡಮಾಡಿದ್ದಾರೆ. ಅವುಗಳು ಇಂತಿವೆ.

| ಅ.ನಂ. | ಕೃತಿ | ಸಂಪಾದಕರು | ವರ್ಷ |
|---|---|---|---|
| ೧) | ಸೀಮೆ | ೧)ಪ್ರೊ॥ ಚಂದ್ರಕಾಂತ ಪೋಕಳೆ<br>೨)ಡಾ॥ ಅನಿಲ ಕಮತಿ | ೧೯೯೭ |
| ೨) | ಕನ್ನಡ-ಕನ್ನಡ-ಕರ್ನಾಟಕ | ೧)ಎಲ್.ಎಸ್.ಶೇಷಗಿರಿರಾವ<br>೨)ಗೋರೂರು ಚನ್ನಬಸಪ್ಪ<br>೩)ರಾ.ನಂ. ಚಂದ್ರಶೇಖರ | ೧೯೯೯ |
| ೩) | ಕನ್ನಡಪರ ಚಿಂತನೆ ಪರಂಪರೆ | ಕಾ.ವೆಂ.ಶ್ರೀನಿವಾಸಮೂರ್ತಿ | ೨೦೦೦ |
| ೪) | ಆಧುನಿಕ ಕರ್ನಾಟಕದ ಆತಂಕಗಳು | ರಾ.ನಂ. ಚಂದ್ರಶೇಖರ | ೨೦೦೧ |
| ೫) | ದೈನಂದಿನ ಬದುಕಿನಲ್ಲಿ ಕನ್ನಡ | ಕನ್ನಡಿಗರ ಬಳಗದ ಸದಸ್ಯರು ಚಿಂಚಣಿ | ೨೦೦೨ |
| ೬) | ಕನ್ನಡತನ ಮತ್ತು ಭಾರತೀಯತೆ | ಡಾ. ವಿ. ಪಿ. ನಾರಾಯಣ | ೨೦೦೨ |
| ೭) | ಕನ್ನಡ ಕನ್ನಡ ಬರ್ರಿ ನಮ್ಮ ಸಂಗಡ | ಪ್ರೊ. ಚಂದ್ರಶೇಖರ ಪಾಟೀಲ | ೨೦೦೨ |
| ೮) | ಕನ್ನಡ ಕಾಯಕಯೋಗಿ ಡಾ॥ ಶಿವಬಸವ ಸ್ವಾಮೀಜಿ | ಡಾ. ಬಸವರಾಜ ಜಗಜಂಪಿ | ೨೦೦೨ |
| ೯) | ಕನ್ನಡ ಕೋಟೆ ಕೆ.ಎಲ್.ಇ | ಪ್ರೊ.ಬಿ. ಎಸ್. ಗವಿಮಠ | ೨೦೦೨ |
| ೧೦) | ಕನ್ನಡ ಜಗದ್ಗುರು | ಪ್ರೊ.ಚಂದ್ರಶೇಖರ ವಸ್ತ್ರದ | ೨೦೦೩ |
| ೧೧) | ಕವಿ ಕಣವಿ ಸಂದರ್ಶನ | ಡಾ. ಜಿ.ಎಮ್. ಹೆಗಡೆ | ೨೦೦೩ |
| ೧೨) | ರಂಗಭೂಮಿಯ ಕನ್ನಡ ಸಂವೇದನೆ | ಡಾ. ರಾಮಕೃಷ್ಣ ಮರಾಠೆ | ೨೦೦೩ |
| ೧೩) | ಮಹಾಜನ ವರದಿಯ ಅವಲೋಕನ | ಡಾ. ಓಂಕಾರ ಕಾಕಡೆ | ೨೦೦೩ |
| ೧೪) | ಕನ್ನಡ ಕಟ್ಟೋಣ | ಡಾ. ಪಾಟೀಲ ಪುಟ್ಟಪ್ಪ | ೨೦೦೩ |
| ೧೫) | ಕರ್ನಾಟಕದ ಹಿಂದೂಸ್ಥಾನಿ ಸಂಗೀತಗಾರರು | ಪ್ರೊ. ಸದಾನಂದ ಕನವಳ್ಳಿ | ೨೦೦೪ |

| | | | |
|---|---|---|---|
| ೧೬) | ಕರ್ನಾಟಕ ಏಕೀಕರಣ ಚಳುವಳಿ ಮತ್ತು ಮಹಿಳೆ | ಡಾ. ರತ್ನಶೀಲಾ ಗುರೆಡ್ಡಿ | ೨೦೦೪ |
| ೧೭) | ನಾಥ ಸಂಪ್ರದಾಯ | ಪ್ರೊ. ಚಂದ್ರಕಾಂತ ಪೋಕಳೆ | ೨೦೦೪ |
| ೧೮) | ಬೆಳಗಾವಿ ಜಿಲ್ಲೆಯ ಸಾಹಿತ್ಯ ದರ್ಶನ | ಡಾ. ಪಿ.ಜಿ.ಕೆಂಪಣ್ಣವರ | ೨೦೦೪ |
| ೧೯) | ನಮ್ಮನಾಡು-ನುಡಿ ಮತ್ತು ಗಡಿ | ಶ್ರೀ ಎಸ್. ವಿ. ಪಾಟೀಲ | |
| ೨೦) | ಕನ್ನಡದ ಕೂಲಿ ಶ್ರೀರಾಮ ಜಾಧವ | ಪ್ರೋ. ವಿಜಯಲಕ್ಷ್ಮಿ ಬೋಸಲೆ | ೨೦೦೫ |
| ೨೧) | ಕೃಷ್ಣಾತೊರೆ (ಬುಜೇಂದ್ರ ಮಹೇಶವಾಡಗಿಯವರ ಸಮಗ್ರ ಕಾವ್ಯ) | ಡಾ. ಪಿ.ಜಿ.ಕೆಂಪಣ್ಣವರ | ೨೦೦೬ |
| ೨೨) | ಜ್ಞಾನ ಒಂದಿದ್ದ ಮ್ಯಾಲೆ ಮಾನಕೇನ ಕಡ್ಮೆಯಿಲ್ಲ (ಕಲ್ಮೇಶ್ವರ ತತ್ವ ಪದಗಳು) | ಡಾ. ಪಿ.ಜಿ. ಕೆಂಪಣ್ಣವರ | ೨೦೦೭ |
| ೨೩) | ಇಂಚರ (ಇಂಚಲರ ಸಮಗ್ರ ಕಾವ್ಯ) | ಶ್ರೀ. ಬಿ. ಎಸ್. ಗವಿಮಠ | ೨೦೦೭ |
| ೨೪) | ಇದು ನಮ್ಮ ಕರ್ನಾಟಕ | ಪ್ರೊ. ಸುರೇಶ ಕುಲಕರ್ಣಿ | ೨೦೦೭ |
| ೨೫) | ಕರ್ನಾಟಕದ ಗಂಧರ್ವರು | ಪ್ರೊ. ಸುರೇಶ ಜೋಷಿ | ೨೦೦೭ |
| ೨೬) | ಸಿರಿಗನ್ನಡ ತೇರು | ಶ್ರೀ. ಶ್ರೀಪಾದ ಕುಂಬಾರ ಡಾ॥ ದಯಾನಂದ ನೂಲಿ. | |

ಈ ರೀತಿಯಾದ ಕನ್ನಡದ ಕೃತಿಗಳನ್ನು ಹೊರತಂದಿರುವ ಕಾರ್ಯಗಳನ್ನು ಚಿಂಚಣಿಯ ಶ್ರೀಗಳು ಮಾಡುತ್ತಿದ್ದು ಇದರಿಂದ ಚಿಕ್ಕೋಡಿ ತಾಲೂಕಿನ ಹೆಸರು ಕನ್ನಡದ ನಕ್ಷೆಯಲ್ಲಿ ಶಾಶ್ವತವಾಗಿ ಉಳಿಯುವದರೊಂದಿಗೆ ಕನ್ನಡ ಸಾರಸ್ವತ ಲೋಕಕ್ಕೆ ತನ್ನದೇ ಆದ ಕೊಡುಗೆಯನ್ನು ಕೊಡುವಲ್ಲಿ ಈ ಮಠದ ಪಾತ್ರ ಬಹು ಅಮುಲ್ಯವಾದದ್ದು.

ಕ್ರಿ ಶ. ೧೧೬೫ ರ ಸುಮಾರಿಗೆ ಹೊಲ್ಲಗಾಂವುಡನೆಂಬ ಕವಿಯಿಂದ ಪ್ರಾರಂಭವಾದ ಚಿಕ್ಕೋಡಿ ತಾಲೂಕಿನ ಕನ್ನಡ ಸಾಹಿತ್ಯದ ಚಿಕ್ಕ ಮರ ಇಂದು ಹೆಮ್ಮರವಾಗಿ ನಾಡಿನ ವಾಹಿನಿಯನ್ನು ವಿಸ್ತಾರಗೊಳಿಸಿದೆ. ೧೯೫೪ ರಲ್ಲಿ ಪ್ರಾರಂಭವಾದ ಶಮನೇವಾಡಿ "ಸ್ನೇಹ ಪ್ರಕಾಶನವು" ಅತಿ ಉಪಯುಕ್ತವಾದ ೧೨ ಕೃತಿಗಳನ್ನು ಬೆಳಕಿಗೆ ತಂದಿದೆ.

೧೯೯೭ ರಿಂದ ಇಲ್ಲಿಯ ವರೆಗೆ ೨೬ ಕೃತಿಗಳ ಹೊರತಂದ ಚಿಕ್ಕೋಡಿ ಗಡಿಯ ಗುಡಿ ಹೊನ್ನಕಳಸದಂತಿರುವ ಚಿಂಚಣಿಯ ಅಲ್ಲಮ ಪ್ರಭು ಸಿದ್ಧ ಸಂಸ್ಥಾನಮಠ ಕನ್ನಡ ನಾಡಿನ ಲೇಖಕರನ್ನು ಪರಿಚಯಿಸುತ್ತಿರುವ ಈ ಮಠದ ಕೀರ್ತಿ ಕರ್ನಾಟಕದ ತುಂಬೆಲ್ಲಾ ವ್ಯಾಪಿಸಿದೆ.

೧೯೮೮ ರಲ್ಲಿ ಪ್ರಾರಂಭವಾದ ಯಕ್ಸಂಬಾದ "ಗೆಳೆಯರ ಬಳಗ" ಕನ್ನಡ ನಾಡಿನ ಮತ್ತು ಗಡಿನಾಡ ಕನ್ನಡಿಗರಿಗೆ ಕನ್ನಡ ಸಾಹಿತ್ಯದ ವಿಚಾರವನ್ನು ತಲುಪಿಸಲು ಈ ಗೆಳೆಯರ ಬಳಗ ವರ್ಷವಿಡಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕರ್ನಾಟಕ ರಾಜೋತ್ಸವದಂದು ನಾಡಿನ ಶ್ರೇಷ್ಠ ಸಾಹಿತಿಗಳನ್ನು ಕರೆತಂದು ತಾಲೂಕಿನ ಸಾಹಿತಿಗಳಿಗೆ ಪ್ರೇರಣೆಯನ್ನು ತುಂಬುವ ಕಾರ್ಯ ಮಾಡುತ್ತಿದೆ. ಇದರೊಂದಿಗೆ ಚಿಕ್ಕೋಡಿ ತಾಲೂಕವು ರಿವಾಜ ಹಾಡುಗಳ ಕುಣಿತ, ಕರಡಿ ಮಜಲು ಮೇಳ, ಕುರುಬರ ದಟ್ಟಿ ಕುಣಿತ, ಗೀಗೀ ಪದಗಳು, ಸೋಂಗೀ ಭಜನಾ ಮಂಡಳಿಗಳು, ಎಲ್ಲಮ್ಮನ ಪದಗಳು ತಾಲೂಕಿನ ಶ್ರೇಷ್ಠ ಜನಪದ ಸಾಹಿತ್ಯವನ್ನು ಸಮಾಜಕ್ಕೆ ತಲುಪಿಸುತ್ತಿವೆ.

ಚಿಕ್ಕೋಡಿಯ ಶಿವಲಿಂಗ ಸ್ವಾಮಿಗಳು ಖ್ಯಾತ ನಾಟಕ ಬರಹಗಾರರಾಗಿದ್ದು ಇವರ ಸ್ವಂತ ನಾಟಕಗಳನ್ನು ರಚಿಸಿ ಆಡುತ್ತಿದ್ದರು. ಇವರ ಕಂಪನಿಯಲ್ಲಿ ನಾಡೋಜ ಏಣಗಿ ಬಾಳಪ್ಪನವರು ನಾಟಕದ ಪಾತ್ರಧಾರಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ಚಿಕ್ಕೋಡಿಯವರೆ ಖ್ಯಾತ ಮರಾಠಿ ನಟಿ ಸುಲೋಚನ ಮತ್ತು ಆಶಾ ಪೋತದಾರ ಇವರು ಚಿಕ್ಕೋಡಿ ತಾಲೂಕಿನವರೆ.

ಮೂಲತಃ ಹಾವೇರಿಯವರಾದ ಶ್ರೀಮತಿ ಸೋನುಬಾಯಿ ದೊಡಮನಿ ಸುಮಾರು ೨೦ – ೨೫ ವರ್ಷದಿಂದ ಚಿಕ್ಕೋಡಿಯಲ್ಲಿ ನೆಲೆನಿಂತಿದ್ದು ಇವರು ರಂಗ ನಟಿಯೂ, ನಾಟಕ ಕಂಪನಿಯ ಒಡತಿಯಾಗಿ ಉತ್ತಮ ಗಾಯಕಿಯಾಗಿ ತಾಲೂಕಿನ ಶ್ರೇಯಸ್ಸಿಗಾಗಿ ದುಡಿದ ಮಹಿಳೆ ಇವಳಾಗಿದ್ದು ಇವಳು ನಾಟಕ ಅಕಾಡಮಿ ಸದಸ್ಯಳಾಗಿದ್ದು ಅನೇಕ ರಂಗ ಕಲಾವಿದರಿಗೆ ಮಾಶಾಸನ ದೊರಕಿಸಿ ಕೊಟ್ಟ ಹಿರಿಮೆ ಇವಳಿಗೆ ಸಲ್ಲಬೇಕು."[೮]

ಈ ರೀತಿಯಾಗಿ ಚಿಕ್ಕೋಡಿ ತಾಲೂಕು ಒಂದು ಕರ್ನಾಟಕದ ಗಡಿ ತಾಲೂಕು ಆಗಿದ್ದು ಕನ್ನಡ ಹಾಗೂ ಮರಾಠಿ ಭಾಷೆಯ ಸ್ನೇಹದೊಂದಿಗೆ ಬಹು ಭಾಷಾ ಸಾಹಿತ್ಯ ಕೃತಿಗಳ , ಕಾದಂಬರಿಗಳನ್ನು, ನಾಟಕಗಳನ್ನು ಕನ್ನಡ ಸಾರಸ್ವತಕ್ಕೆ ಒದಗಿಸಿ ಕೊಟ್ಟಿದ್ದು ಇದರಿಂದಾಗಿ ಸಾಹಿತ್ಯ ದೃಷ್ಟಿಯಿಂದ ಚಿಕ್ಕೋಡಿ ತಾಲೂಕವು ಸಮೃದ್ಧವಾದ ಸಾಹಿತ್ಯ ಪಡೆದಿದೆ. ಆರಂಭಿಕ ದಿನಗಳಲ್ಲಿ ಮಂದಗತಿಯಲ್ಲಿ ಆರಂಭವಾದ ಸಾಹಿತ್ಯದ ಚಿಗುರು ಇಂದು ಬೆಳೆಯುತ್ತಾ ಬೆಳೆಯುತ್ತಾ ತನ್ನ ಕವಲುಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ವ್ಯಾಪಿಸಿದೆ. ಇದರಿಂದಾಗಿ ಕರ್ನಾಟಕ ಹಾಗೂ ಮರಾಠಿ, ಸಾಹಿತ್ಯ ರಂಗದಲ್ಲಿ ಚಿಕ್ಕೋಡಿ ತಾಲೂಕಿನ ಕೊಡುಗೆ ಅಪಾರವಾಗಿದೆ ಎಂದು ಹೇಳಬಹುದು.

# ಗ್ರಂಥ ಋಣ

| ಕೃತಿ | ಸಂಪಾದಕರು | ಪ್ರಕಟನೆ ವರ್ಷ | ಪುಟ |
|---|---|---|---|
| '೧' ಬೆಳಗಾವಿ ಜಿಲ್ಲೆಯ ಸಾಹಿತ್ಯ ದರ್ಶನ | ಡಾ. ಪಿ. ಜಿ. ಕೆಂಪಣ್ಣವರ | ೨೦೦೪ | ೧೮೧ |
| '೨' ಸೀಮೆ | ಡಾ. ಅನಿಲ. ಕಮತಿ<br>ಪ್ರೊ. ಚಂದ್ರಕಾಂತ. ಪೋಕಳೆ | ೧೯೯೭ | ೬೫ |
| '೩' ನಿಪ್ಪಾಣಿ ದರ್ಶನ (ಮರಾಠಿ) | ರಾಜೇಂದ್ರ ಕಂಗಳೆ | ೨೦೦೨ | ೧೪೦ |
| '೪' ಪ್ರಬಾಂಕಲಿ<br>ಪ್ರಭಾಕರ ಕೋರೆಯವರ<br>ಅಭಿನಂದನಾ ಗ್ರಂಥ | ಪ್ರೊ. ವ್ಹಿ. ಬಿ. ಹಿರೇಮಠ | ೧೯೯೯ | ೧೦೩ |

# "ಚಿಕ್ಕೋಡಿ ತಾಲೂಕಿನ ಆರ್ಥಿಕ ಚರಿತ್ರೆ"

ಒಂದು ಪ್ರದೇಶ ಆ ಪ್ರದೇಶದ ಭೌಗೋಲಿಕ ಲಕ್ಷಣಗಳು, ಜನಜೀವನ ಮತ್ತು ಆ ಪ್ರದೇಶ ಹೊಂದಿರುವ ಸಂಪರ್ಕ ವ್ಯವಸ್ಥೆಗಳು ಮತ್ತು ಆ ಪ್ರದೇಶದಲ್ಲಿ ಕಂಡು ಬರುವ ಆರ್ಥಿಕ ಸಂಪನ್ಮೂಲಗಳು ವಾಣಿಜ್ಯಿಕ ಬೆಳೆಗಳು ಮತ್ತು ಆ ಪ್ರದೇಶದ ಆರ್ಥಿಕ ಸ್ಥಿತಿಗಳನ್ನು ನಿರ್ಧರಿಸುತ್ತವೆ. ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕವು ಒಂದು ಗಡಿ ತಾಲೂಕು ಭೌಗೋಳಿಕವಾಗಿ ಈ ತಾಲೂಕನ್ನು ಅವಲೋಕಿಸಿದಾಗ ಈ ತಾಲೂಕಿನ ಒಟ್ಟು ಭೌಗೋಳಿಕ ಕ್ಷೇತ್ರ ೧,೨೯,೯೪೯ ಹೆಕ್ಟೇರುಗಳು. ಇದರಲ್ಲಿ ೧,೦೦,೫೩೩ ಹೆಕ್ಟೇರ ಭೂಮಿ ವ್ಯವಸಾಯಕ್ಕೆ ಬಳಕೆಯಾಗುವ ಪ್ರದೇಶವಾಗಿದೆ.ಈ ತಾಲೂಕವು ಒಟ್ಟು ನಾಲ್ಕು ಹೋಬಳಿಗಳನ್ನು ಒಳಗೊಂಡ ೧೦೩ ಕಂದಾಯ ಗ್ರಾಮಗಳನ್ನು ಹೊಂದಿದೆ. ಈ ತಾಲೂಕವು ೨೦೦೧ ರ ಜನಗಣತಿಯ ಪ್ರಕಾರ ೫,೬೭,೬೦೧ ಜನಸಂಖ್ಯೆಯನ್ನು ಹೊಂದಿದ್ದು ಇದರಲ್ಲಿ ಗಂಡಸರ ಸಂಖ್ಯೆ ೨,೯೦,೯೪೩, ಹೆಂಗಸರು ೨,೭೬,೬೫೮. ಈ ತಾಲೂಕಿನ ಕೃಷಿ ಯೋಗ್ಯ ಜಮೀನು ನೀರಾವರಿಗೆ ಒಳಪಟ್ಟಿದ್ದು ಒಟ್ಟು ನೀರಾವರಿ ಕ್ಷೇತ್ರ ೩೩,೯೩೭ ಹೆಕ್ಟೇರ. ಕೆರೆಗಳಿಂದ ೧.೬೪೦ ಹೆಕ್ಟೇರ, ಬಾವಿಗಳಿಂದ ೯.೫೪೮ ಹೆಕ್ಟೇರ, ಕೊಳವೆ ಬಾವಿಗಳಿಂದ ೭.೬೧೨ ಹೆಕ್ಟೇರ ಏತ ನೀರಾವರಿಯಿಂದ ೨.೧೪೭೬ ಹೆಕ್ಡೇರ ಘಟಪ್ರಭಾ ಎಡದಂಡೆ ಕಾಲುವೆಯಿಂದ ೬.೬೪೦ ಹೆಕ್ಟೇರ ಇತರ ನದಿ, ಹಳ್ಳಗಳಿಂದ ೬.೦೮೪ ಹೆಕ್ಟೇರ ಪ್ರದೇಶವು ನೀರಾವರಿಗೆ ಒಳಪಟ್ಟಿದ್ದು ಒಟ್ಟು ಈ ತಾಲೂಕಿನ ವಾಡಿಕೆಯ ಮಳೆಯ ಪ್ರಮಾಣ ವಾರ್ಷಿಕ ಸರಾಸರಿ ೬೩೫.೪ ಮಿಲಿ ಮೀಟರಗಳಷ್ಟಾಗಿದೆ.

ಚಿಕ್ಕೋಡಿ ತಾಲೂಕವು ಕೃಷಿಗೆ ಯೋಗ್ಯವಾದ ಜಮೀನನ್ನು ಹೊಂದಿದ್ದು ಈ ಜಮೀನಿನಲ್ಲಿ ಜೋಳ, ನೆನೆಗಡಲೆ, ತಂಬಾಕು, ಕಬ್ಬು, ಹತ್ತಿ, ಮುಂತಾದ ಬೆಳೆಗಳನ್ನು ಬೆಳೆಯಲಾಗುತ್ತಿದೆ. ಈ ತಾಲೂಕಿನ ಪ್ರಮುಖ ವಾಣಿಜ್ಯಿಕ ಬೆಳೆ ಎಂದರೆ ತಂಬಾಕಾಗಿದೆ. ಇದನ್ನು ಸುಮಾರು ೨೦,೦೦೦ ಹೆಕ್ಟೇರ ಭೂಮಿಯಲ್ಲಿ ಬೆಳೆಯಲಾಗುತ್ತಿದೆ. ೧೯,೦೦೦ ಹೆಕ್ಟೇರ ಭೂಮಿಯಲ್ಲಿ ಶೇಂಗಾ ಮತ್ತು ಜೋಳವನ್ನು ಬೆಳೆಯುತ್ತಾರೆ. ತಂಬಾಕಿನ ಬೆಳೆಗೆ ಈ ತಾಲೂಕವು ಪ್ರಸಿದ್ಧವಾಗಿದ್ದು ಈ ತಾಲೂಕಿನ ಅಕ್ಕೋಳ ಗ್ರಾಮದ ತಂಬಾಕಿಗೆ

ಅಂತರಾಷ್ಟ್ರೀಯ ಮಟ್ಟದಲ್ಲಿ ಮಾನ್ಯತೆ ದೊರೆತಿದೆ. ಈ ತಾಲೂಕಿನ ಅಕ್ಕೋಳ, ಸದಲಗಾ, ಗಳತಗಾ ಮುಂತಾದ ಪ್ರದೇಶಗಳು ತಂಬಾಕು ಬೆಳೆಗೆ ಪ್ರಸಿದ್ದಿಯಾಗಿವೆ. ಇದು ಈ ತಾಲೂಕಿನ ಪ್ರಮುಖ ವಾಣಿಜ್ಯಕ ಬೆಳೆಯಾಗಿದೆ.[೧] ಈ ತಂಬಾಕಿನ ಬೀಜೋತ್ಪಾದನೆ ಮತ್ತು ಸಸಿಗಳ ತಯಾರಿಸುವ ಕಾರ್ಯವನ್ನು ಈ ತಾಲೂಕಿನ ಕೆರೂರು ಮತ್ತು ಕಾಡಾಪೂರ ಗ್ರಾಮಗಳಲ್ಲಿ ಮಾಡುತ್ತಾರೆ. ಇಲ್ಲಿಯ ತಂಬಾಕಿನ ಬೀಜ ಮತ್ತು ಸಸಿಗಳನ್ನು ನಿಪ್ಪಾಣಿ ಮಾರುಕಟ್ಟೆಯಲ್ಲಿ ಒಯ್ದು ಮಾರಾಟ ಮಾಡುತ್ತಾರೆ. ಇಲ್ಲಿಯ ಭೂಮಿ ಕರಿ ಮಣ್ಣಿನಿಂದ ಮಿಶ್ರಿತವಾದ ಫಲವತ್ತಾದ ಭೂಮಿಯಾಗಿದ್ದರಿಂದ ಪ್ರತಿ ಎಕರೆ ಭೂಮಿಗೆ ೩,೦೦೦ ತಂಬಾಕಿನ ಸಸಿಗಳನ್ನು ನೆಡುತ್ತಾರೆ. ಈ ಬೆಳೆ ಅಲ್ಪ ಪ್ರಮಾಣದ ಮಳೆ ಆಧಾರಿತವಾಗಿದ್ದು ಈ ಪ್ರದೇಶದಲ್ಲಿ ಆನಂದ – ೨, ಮತ್ತು ಎಸ್ – ೨೦ ಹೊಸ ತಳಿಯ ತಂಬಾಕುಗಳನ್ನು ಬೆಳೆಯುತ್ತಾರೆ. ಇದು ಅಧಿಕ ಇಳುವರಿಯನ್ನು ಕೊಡುವ ವಾಣಿಜ್ಯಕ ಬೆಳೆಯಾಗಿದ್ದು ಪ್ರತಿ ಎಕರೆಯೊಂದಕ್ಕೆ ೪೦೦– ರಿಂದ ೬೦೦ ಕೆ. ಜಿ ಯ ವರೆಗೆ ತಂಬಾಕನ್ನು ಬೆಳೆಯುತ್ತಾರೆ. ಇದಕ್ಕೆ ನೈಸರ್ಗಿಕ ಗೊಬ್ಬರವಾದ ಸಣಬಿನ ಗಿಡಗಳನ್ನು ಬಿತ್ತಿ ಅದರ ಸಾವಯವ ಗೊಬ್ಬರದಿಂದ ತಂಬಾಕನ್ನು ಬೆಳೆಯುತ್ತಾರೆ. ಕ್ರಿ. ಶ. ೧೯೮೭ ರಲ್ಲಿ ತಂಬಾಕಿಗೆ ನಿಗದಿತವಾದ ಯೋಗ್ಯ ಬೆಲೆ ದೊರೆಯದೇ ಇದ್ದಾಗ ನಿಪ್ಪಾಣಿ ಹಾಗೂ ಕೊಲ್ಹಾಪೂರ ರಾಷ್ಟ್ರೀಯ ಹೆದ್ದಾರಿಯ ಮೇಲೆ ಇಲ್ಲಿನ ತಂಬಾಕನ್ನು ಬೆಳೆಯುವ ರೈತರು ಚಳುವಳಿಯನ್ನು ನಡೆಯಿಸಿದರು. ತಾವು ಪ್ರಮುಖವಾಗಿ ಬೆಳೆಯುವ ತಂಬಾಕಿಗೆ ಹಾಗೂ ಇನ್ನಿತರ ಬೆಳೆಗಳಿಗೆ ಯೋಗ್ಯ ಬೆಲೆ ದೊರೆಯಬೇಕೆಂಬುವುದುಅವರ ಬೇಡಿಕೆಯಾಗಿತ್ತು. ತಾವು ಬೆಳೆದ ಬೆಳೆಗಳಿಗೆ ಯೋಗ್ಯ ಬೆಲೆ ದೊರಕಿಸಿಕೊಳ್ಳುವುದು ತಮ್ಮ ಹಕ್ಕು ಎಂಬುದರ ಬಗ್ಗೆ ಜಾಗೃತಿಯನ್ನು ಜನರಲ್ಲಿ ಮೂಡಿಸಿಕೊಳ್ಳಲು ಹಮ್ಮಿಕೊಂಡ ಈ ಚಳುವಳಿಯಲ್ಲಿ ಅನೇಕ ರೈತರು ಹುತಾತ್ಮರಾದರು. ಅವರ ನನೆಪಿಗಾಗಿ ಹುತಾತ್ಮರ ಸ್ಮರಕಗಳನ್ನು ಇಲ್ಲಿ ನಿರ್ಮಿಸಲಾಗಿದ್ದು ಪ್ರತಿ ವರ್ಷದ ಆ ದಿನದಂದು ಅಲ್ಲಿ ವಾರ್ಷಿಕ ಹುತಾತ್ಮರ ಸ್ಮರಣೆಯನ್ನು ಆಚರಿಸುತ್ತಾರೆ.

ಗಡಿನಾಡು ತಾಲೂಕಾಗಿರುವ ಚಿಕ್ಕೋಡಿ ಬೆಟ್ಟ ಗುಡ್ಡಗಳಿಂದ ಆವೃತ್ತವಾದ ಪ್ರದೇಶ ಸುಮಾರು ೫೪೭ ಹೆಕ್ಟೇರಿನಷ್ಟು ಅರಣ್ಯ ಪ್ರದೇಶವನ್ನು ಈ ತಾಲೂಕು ಹೊಂದಿದೆ. ಇಲ್ಲಿಯ ಜನತೆ ಒಕ್ಕಲುತನವನ್ನು ಪ್ರಮುಖವಾಗಿ ಆಶ್ರಯಿಸಿಕೊಂಡಿದ್ದಾರೆ. ಕೃಷಿಗೆ ಯೋಗ್ಯವಾದ ಜಮೀನಿನಲ್ಲಿ ಇನ್ನೊಂದು ವಾಣಿಜ್ಯಕ ಬೆಳೆಯಾದ ಕಬ್ಬನ್ನು ಇಲ್ಲಿ ಬೆಳೆಯಲಾಗುತ್ತದೆ. ಬೆಳಗಾವಿ ಜಿಲ್ಲೆಯ ತಾಲೂಕುಗಳಲ್ಲಿ ಅತೀ ಹೆಚ್ಚಿನ ಸಕ್ಕರೆ ಕಾರ್ಖಾನೆಗಳನ್ನು ಹೊಂದಿದ ತಾಲೂಕು ಇದಾಗಿದೆ. ಚಿಕ್ಕೋಡಿ ತಾಲೂಕಿನಲ್ಲಿ ಒಟ್ಟಿಗೆ ೩ ಸಕ್ಕರೆ ಕಾರ್ಖಾನೆಗಳಿದ್ದು ಅವುಗಳ ಪೈಕಿ ಸಹಕಾರಿ ರಂಗದದಲ್ಲಿ ೨ ಸಕ್ಕರೆ ಕಾರ್ಖಾನೆಗಳು ಕಾರ್ಯ ನಿರ್ವಹಿಸುತ್ತಿವೆ. ಅವುಗಳೆಂದರೆ ೧) ಶ್ರೀ ದೂಧಗಂಗಾ ಕೃಷಾ ಸಹಕಾರಿ

ಸಕ್ಕರೆ ಕಾರ್ಖಾನೆ, ನಿಯಮಿತ ಚಿಕ್ಕೋಡಿ ೨) ಶ್ರೀ ಹಾಲಸಿದ್ಧನಾಥ ಸಕ್ಕರೆ ಕಾರ್ಖಾನೆ ನಿಯಮಿತ ನಿಪ್ಪಾಣಿ. ಮತ್ತು ಒಂದು ಸಕ್ಕರೆ ಕಾರ್ಖಾನೆ ಖಾಸಗಿ ಕಂಪನಿಯದ್ದಾಗಿದ್ದು ಶ್ರೀ ವೆಂಕಟೇಶ್ವರ ಪಾವರ ಪ್ರೊಜೆಕ್ಟ ಪ್ರಾ.ಲಿ, ಬೆಡಕಿಹಾಳ. ಈ ಮೂರು ಸಕ್ಕರೆ ಕಾರ್ಖಾನೆಗಳು ಚಿಕ್ಕೋಡಿ ತಾಲೂಕಿನ ಪ್ರದೇಶದಲ್ಲಿ ಕಬ್ಬಿನ ಉತ್ಪಾದನೆ ಮತ್ತು ಸಕ್ಕರೆ ಉತ್ಪಾದನೆಯಲ್ಲಿ ಗುಣಮಟ್ಟವನ್ನು ಕಾಯ್ದು ಕೊಳ್ಳುವುದರೊಂದಿಗೆ ಅಂತರರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಹೆಸರನ್ನು ಗುರುತಿಸಿಕೊಂಡಿವೆ.

೬-೧೧-೧೯೭೪ ರಂದು ಶ್ರೀ ದೂಧಗಂಗಾ ಕೃಷಾ ಸಹಕಾರಿ ಸಕ್ಕರೆ ಕಾರ್ಖಾನೆಯು ಪ್ರಾರಂಭವಾಯಿತು. ಈ ಕಾರ್ಖಾನೆಯ ಸಂಸ್ಥಾಪಕ ಚೇರಮನ್‌ರಾಗಿ ಅಂಕಲಿಯ ಶ್ರೀ ಚಿದಾನಂದ ಬಸವಪ್ರಭು ಕೋರೆಯವರು ಹಾಗೂ ಶ್ರೀ ಮಲ್ಲಯಾಸ್ವಾಮಿ ಕಲ್ಲಯ್ಯಾಸ್ವಾಮಿ ಕವಟಗಿಮಠ ಇವರು ಸರ್ವಾನು ಮತದಿಂದ ಆಯ್ಕೆಯಾದರು. ಕೋರೆ ಮನೆತನದವರು ಹಾಗೂ ಕವಟಗಿಮಠ ಮನೆತನದವರು ಇಂದಿಗೂ ಈ ಸಕ್ಕರೆ ಕಾರ್ಖಾನೆಯ ಏಳ್ಗೆಗಾಗಿ ಹಗಲಿರುಳು ಶ್ರಮಿಸುತ್ತಲಿದ್ದಾರೆ. ಈ ಸಕ್ಕರೆ ಕಾರ್ಖಾನೆಯು ತನ್ನ ಮೊದಲನೆಯ ಕಬ್ಬು ನುಉರಿಸುವ ಹಂಗಾಮವನ್ನು ದಿನಾಂಕ ೦೬-೧೧-೧೯೭೪ ರಂದು ಅಂದಿನ ಬಾರತದ ಉಪರಾಷ್ಟ್ರಪತಿಗಳಾದ ಶ್ರೀಮಾನ. ಬಿ. ಡಿ. ಜತ್ತಿಯವರ ಅಮೃತ ಹಸ್ತದಿಂದ ಉದ್ಘಾಟನೆಗೊಂಡಿತು. ಕರ್ನಾಟಕದ ಮುಖ್ಯ ಮಂತ್ರಿಗಳಾದ ಶ್ರೀ. ಡಿ. ದೇವರಾಜ ಅರಸ ಇವರ ಘನ ಅಧ್ಯಕ್ಷತೆಯಲ್ಲಿ ನಡೆದ ಉಧ್ಘಾಟನಾ ಸಮಾರಂಭಕ್ಕೆ, ಕರ್ನಾಟಕ ರಾಜ್ಯದ ಮಂತ್ರಿಗಳಾದ, ಸಿ. ಎನ್. ಪಾಟೀಲ, ವ್ಹಿ. ಎಸ್. ಕೌಜಲಗಿ, ಶ್ರೀ. ಆರ್. ಡಿ. ಕಿತ್ತೂರ, ಹಾಗೂ ನೆರೆಯ ಮಹಾರಾಷ್ಟ್ರ ರಾಜ್ಯದ ಆಹಾರ ಮಂತ್ರಿಗಳಾದ ಶ್ರೀ ರತ್ನಪ್ಪಣ್ಣಾ ಕುಂಬಾರ ಮತ್ತಿತರರು ಉಪಸ್ಥಿತರಿದ್ದರು. ಆರಂಭಿಕ ಈ ಸಮಾರಂಭವನ್ನು ಅತೀ ವಿಜ್ರುಂಬನೆಯಿಂದ ಆಚರಿಸುವುದರೊಂದಿಗೆ ಈ ಭಾಗದ ಜನತೆಯ ಸಂಪೂರ್ಣ ಬೇಡಿಕೆಗಳನ್ನು ಈಡೇರಿಸುವಲ್ಲಿ ಯಶಸ್ವಿಯಾಯಿತು. ಶ್ರೀ ಶಾಂತಪ್ಪಣ್ಣಾ ಮಿರ್ಜಿ, ಶ್ರೀ. ಅಶೋಕ ಪಾಟೀಲ,, ಶ್ರೀ. ದಾದು. ಕಾಟೆ, ಶ್ರೀ ಸುರೇಶ ಕೋರೆ ಮತ್ತು ಜಿಣ್ಣಪ್ಪಣ್ಣಾ ಪಾಟೀಲ ಮುಂತಾದರು ಅಧ್ಯಕ್ಷರಾಗಿ ಅವಿಸ್ಮರಣೀಯ ಕಾರ್ಯ ಮಾಡಿದ್ದಾರೆ. ಈಗ ಸಧ್ಯಕ್ಕೆ ಶ್ರೀ. ಮಹಾಂತೇಶ ಮಲ್ಲಯ್ಯಾಸ್ವಾಮಿ ಕವಟಗಿಮಠ ಇವರು ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಲಿದ್ದಾರೆ.

ಕ್ರಿ. ಶ. ೧೯೮೮ ರಲ್ಲಿ ಈ ಸಕ್ಕರೆ ಕಾರ್ಖಾನೆಯ ರೂವಾರಿಗಳಾದ ಶ್ರೀ ಚಿದಾನಂದ ಕೋರೆಯವರು ಲಿಂಗೈಕ್ಯರಾದರು. ಇವರ ಈ ಸ್ಥಳವನ್ನು ಇವರ ತಮ್ಮನಾದ ಪ್ರಭಾಕರ ಕೋರೆಯವರು ಹೊತ್ತುಕೊಳ್ಳುವುದರ ಮುಖಾಂತರ ಆಧುನಿಕ ಜಗತ್ತಿನ ಸ್ಪರ್ಧಾತ್ಮಕ ಆರ್ಥಿಕತೆಯತ್ತ ಕಾರ್ಖಾನೆಯನ್ನು ಕೊಂಡೊಯ್ಯುವಲ್ಲಿ ಯಶಸ್ವಿಯಾಗಿದ್ದಾರೆ. ಈ ಕಾರ್ಖಾನೆಯಲ್ಲಿ ಸುಮಾರು ೩೯೨ ಪೂರ್ಣಾವಧಿ ಕೆಲಸಗಾರರು ೩೯೮ ಹಂಗಾಮಿ

ಕೆಲಸಗಾರರು ೧೫೦ ದಿನಗೂಲಿ ಪಡೆಯುವ ಕಾರ್ಮಿಕರಿದ್ದಾರೆ. ಈ ಕಾರ್ಖಾನೆಯು ವರ್ಷದ ೧೫೦ ದಿನಗಳಿಂದ ೩೦೦ ದಿನಗಳ ವರೆಗೆ ಕಾರ್ಯವನ್ನು ನಿರ್ವಹಿಸುತ್ತದೆ.

ಇದೇ ರೀತಿಯಾಗಿ ತಾಲೂಕಿನ ಇನ್ನೊಂದು ಪ್ರಮುಖ ಸಕ್ಕರೆ ಕಾರ್ಖಾನೆ ಎಂದರೆ 'ಶ್ರೀ ಹಾಲಸಿದ್ಧನಾಥ ಸಹಕಾರಿ ಸಕ್ಕರೆ ಕಾರ್ಖಾನೆ, ನಿಪ್ಪಾಣಿ' ಈ ಕಾರ್ಖಾನೆಯ ಅಡಿಗಲ್ಲು ಸಮಾರಂಭವನ್ನು ಕ್ರಿ. ಶ. ೧೯೮೨ ರಲ್ಲಿ ಸನ್ಮಾನ್ಯ ಶ್ರಿ ರಾಜೀವ ಗಾಂಧಿಯವರ ಅಮೃತ ಹಸ್ತದಿಂದ ನೆರವೇರಿಸಲಾಯಿತು. ಕ್ರಿ. ಶ. ೧೯೮೬ ರಲ್ಲಿ ಆಗಿನ ಕೇಂದ್ರ ಸಚಿವರಾದ ಸನ್ಮಾನ್ಯ ಶ್ರೀ ಶಿವರಾಜ ಪಾಟೀಲ ಇವರ ಅಮೃತ ಹಸ್ತದಿಂದ ಕಾರ್ಖಾನೆಯು ಪ್ರಾರಂಭವಾಯಿತು. ಅಂದಿನ ಸಂಸ್ಥಾಪನಾ ಅಧ್ಯಕ್ಷರಾಗಿ ಶ್ರೀ ಬಾಬುರಾವ ಪಾಟೀಲ (ಬೂದಿಹಾಳಕರ) ರವರು ಕಾರ್ಯ ನಿರ್ವಹಿಸಿದರು. ಈ ಕಾರ್ಖಾನೆಯು ೧೨೫೦ ಟಿ.ಸಿ.ಡಿ. ಸಾಮರ್ಥ್ಯ ಹೊಂದಿದ್ದು ಈ ಭಾಗದ ಜನತೆಯ ಆರ್ಥಿಕತೆಯ ಆಶಾಕಿರಣವಾಗಿ ಮುಂದುವರೆದಿದೆ. ಇಂದು ಈ ಕಾರ್ಖಾನೆಯು ಶ್ರೀ ಬಾಬಾಸಾಹೇಬ ಸಾಸನೆಯವರ ಅಧ್ಯಕ್ಷತೆಯಲ್ಲಿ ತನ್ನ ಸಾಧನೆಯತ್ತ ದಾಪುಗಾಲು ಇಡುತ್ತಿದೆ.

ತಾಲೂಕಿನ ಆರ್ಥಿಕತೆಯಲ್ಲಿ ತನ್ನದೆ ಆದ ಪಾತ್ರವನ್ನು ವಹಿಸಿರುವ ಮತ್ತೊಂದು ಸಕ್ಕರೆ ಕಾರ್ಖಾನೆ ಖಾಸಗಿ ಸ್ವಾಮಿತ್ವದಲ್ಲಿ ಸಾಗಿದ್ದರೂ ತನ್ನ ಸುತ್ತ ಮುತ್ತಲಿನ ಜನತೆಯ ಆರ್ಥಿಕತೆಯ ಒಂದು ಭಾಗವೆಂದೇ ಕರೆಯಿಸಿಕೊಂಡಿರುವ ವೆಂಕಟೇಶ್ವರ ಸಕ್ಕರೆ ಕಾರ್ಖಾನೆ ಬೆಡಕಿಹಾಳ ಪ್ರಾ. ಲಿ. ಬೆಡಕಿಹಾಳ ಈ ಕಾರ್ಖಾನೆಯು ಕ್ರಿ. ಶ. ೨೦೦೧ ರಲ್ಲಿ ತನ್ನ್ ಕಾರ್ಯಾರಂಭವನ್ನು ಪ್ರಾರಂಭಿಸಿ ಇಲ್ಲಿಗೆ ಏಳು ವಸಂತಗಳನ್ನು ಕಳೆದಿದೆ. ಪ್ರತಿ ವರ್ಷ ಏಳು ಲಕ್ಷ ಟನ್ ಕಬ್ಬನ್ನು ನುರಿಸಿ ೮ ಲಕ್ಷ ಚೀಲ ಸಕ್ಕರೆಯನ್ನು ಉತ್ಪಾದಿಸುತ್ತದೆ. ಇದರ ಪ್ರಾರಂಭಿಕ ಅಧ್ಯಕ್ಷರಾಗಿ ಮಹಾದೇವರಾವ ಮಹಾಡಿಕರವರು ಈ ಸಕ್ಕರೆ ಕಾರ್ಖಾನೆಯನ್ನು ಉನ್ನತ ಮಟ್ಟದ ಸಕ್ಕರೆ ಉತ್ಪಾದನೆಯತ್ತ ಕೊಂಡೊಯ್ಯುವಲ್ಲಿ ಯಶಸ್ವಿಯಾಗಿದ್ದಾರಲ್ಲದೆ ಈ ಕಾರ್ಖಾನೆ ೧೨೦೦ ಜನರಿಗೆ ಉದ್ಯೋಗವನ್ನು ನೀಡುವುದರ ಮುಖಾಂತರ ಕಿ. ಶ. ೨೦೦೭ ರಲ್ಲಿ 'ಬೆಸ್ಟ ರಿಕವ್ಹರಿ ಇನ್ ಸೌಥ ಝೋನ' ಎಂಬ ಪ್ರಸಸ್ತಿಗೆ ಪಾತ್ರವಾಗಿದೆ.

ಚಿಕ್ಕೋಡಿ ತಾಲೂಕವು ಬೆಳಗಾವಿ ಜಿಲ್ಲೆಯ ಗಡಿ ಪ್ರದೇಶದಲ್ಲಿರುವುದರಿಂದ ನಿಪ್ಪಾಣಿಯ ಆಯಾತ-ನಿರ್ಯಾತಗಳ ಪ್ರಮುಖ ಕೇಂದ್ರಸ್ಥಾನವೆನಿಸಿದೆ. ಈ ನಗರವು ರಾಷ್ಟ್ರೀಯ ಹೆದ್ದಾರಿ ೪ರ ಮೇಲಿರುವುದರಿಂದ ದೇಶದ ನಾನಾ ಭಾಗಗಳಿಗೆ ಸಂಪರ್ಕ ಕಲ್ಪಿಸುತ್ತದೆ. ಇಲ್ಲಿ ಉತ್ಪಾದಿತವಾದ ಉತ್ಪಾದನೆಗಳು ದೂರ ದೂರ ಪ್ರದೇಶಗಳಿಗೆ ಹೋಗಿ ತಲುಪುತ್ತವೆ. ಚಿಕ್ಕೋಡಿ ತಾಲೂಕವು ಆ ಹಿಂದಿನ ಕಾಲದಿಂದಲೂ ತಾಮ್ರ, ಹಿತ್ತಾಳೆ, ಕಂಚು ಮುಂತಾದ ವಸ್ತುಗಳ ತಯಾರಿಕೆ ಹಾಗೂ ಆಭರಣ ತಯಾರಿಕೆ ಹಾಗೂ ಕುಸುರಿನ ಕೆಲಸಗಳಿಗೆ ಪ್ರಸಿದ್ಧಿಯನ್ನು ಪಡೆದಿದ್ದು ಇದು ತನ್ನ ಕಲಾತ್ಮಕವಾದ

ಗುಡಿ ಕೈಗಾರಿಕೆಗಳಿಂದ ಹೊರದೇಶ ಜನರನ್ನು ಆಕರ್ಷಿಸುತ್ತದೆ. ವಿದೇಶಿ ಯಾತ್ರಿಕನಾದ ಕ್ಯಾಪ್ಟನ್ 'ಮುರ್' ಎಂಬುವನು ಚಿಕ್ಕೋಡಿಯನ್ನು ಸಂದರ್ಶಿಸಿ ಇಲ್ಲಿಯ ವ್ಯಾಪಾರ, ವಾಣಿಜ್ಯಕ ಚಟುವಟಿಕೆಗಳು ಮತ್ತು ಸುತ್ತಲಿನ ಕಣ್ಣಿಗೆ ಅಂದವಾಗಿ ಕಾಣಿಸುವ ನಾಲಿಗೆಗೆ ರುಚಿ ತೋರಿಸುವ ದ್ರಾಕ್ಷಿ ತೋಟಗಳು ಸಾಕಷ್ಟು ಇವೆ. ಮತ್ತು ಅವು ಪ್ರಸಿದ್ಧಿಯನ್ನು ಹೊಂದಿವೆ ಎಂದು ಹೇಳಿದ್ದಾನೆ. ಈ ರೀತಿಯಾದ ಪಾರಂಪರಿಕ ಬೆಳೆಗಳನ್ನು ಮತ್ತು ತನ್ನ ದಿನ ನಿತ್ಯದ ಜೀವನಕ್ಕೆ ಉಪಯೋಗವಾಗುವ ಆಹಾರ ಬೆಳೆಗಳನ್ನು ಉತ್ಪಾದಿಸುವ ತಾಲೂಕು ಇದಾಗಿದೆ.

ಚಿಕ್ಕೋಡಿ ತಾಲೂಕು ತಂಬಾಕು, ಕಬ್ಬು, ಹತ್ತಿ ಮುಂತಾದ ವಾಣಿಜ್ಯ ಬೆಳೆಗಳ ಜೊತೆಗೆ ಗೋಧಿ, ಜೋಳ ಮುಂತಾದ ಉಪ ಬೆಳೆಗಳನ್ನು ಅದರಲ್ಲಿ ಉಪ ಬೆಳೆಯಾಗಿ ಬೆಳೆಯುವ ದ್ವಿಬೆಳೆ ಮಾದರಿಯ ಸಾಗುವಳಿಯನ್ನು ಅಳವಡಿಸಿಕೊಂಡಿದೆ. ಈ ತಾಲೂಕು ಕೈಗಾರಿಕಾ ಮತ್ತು ಕೃಷಿ ಕ್ರಾಂತಿಯ ಪರಿಣಾಮದಿಂದಾಗಿ ಜಗತ್ತಿನ ಆರ್ಥಿಕತೆಯೊಂದಿಗೆ ತಾನೂ ಮುಂದೆ ಸಾಗುತ್ತಿದೆ. ಈ ತಾಲೂಕಿನ ಜನತೆ ತಮ್ಮ ಬೆಳೆಗಳಿಗೆ ಸಾಂಪ್ರದಾಯಕ ಬೇಸಾಯ ಪದ್ಧತಿಯೊಂದಿಗೆ ಆಧುನಿಕ ಮಾದರಿಯ ಬೇಸಾಯ ವಿಧಾನಗಳನ್ನು ಅಳವಡಿಸಿಕೊಳ್ಳುವುದರ ಮುಖಾಂತರ ಹೆಚ್ಚಿನ ಉತ್ಪಾದನೆಯತ್ತ ಮುಂದೆ ಸಾಗುತ್ತಿದ್ದಾರೆ.

ಕ್ರಿ. ಶ. ೧೯೯೧ರ ಜನಗಣತಿಯಲ್ಲಿ ಚಿಕ್ಕೋಡಿ ತಾಲೂಕವು ೪,೮೭,೬೦೦ ಜನ ಸಂಖ್ಯೆಯನ್ನು ಹೊಂದಿದ್ದು ಅದು ಕ್ರಿ. ಶ. ೨೦೦೧ರ ವೇಳೆಗೆ ೫,೬೭,೬೦೧ ಆಗಿದೆ. ಸುಮಾರು ಹತ್ತು ವರ್ಷಗಳ ಅವಧಿಯಲ್ಲಿ ಆದ ಇಲ್ಲಿಯ ಜನಸಂಖ್ಯಾ ಬೆಳವಣಿಗೆಯು ಈ ತಾಲೂಕಿನ ಸಮೃದ್ಧ ಮತ್ತು ಆರ್ಥಿಕ ಸ್ಥಿತಿಗತಿಗಳು ಸುವ್ಯವಸ್ಥಿತವಾಗಿರುವುದನ್ನು ಸೂಚಿಸುತ್ತದೆ. ಬೆಳಗಾವಿ ಜಿಲ್ಲೆಯಲ್ಲಿ ಅತೀ ಹೆಚ್ಚು ಜನಸಂಖ್ಯೆಯನ್ನು ಹೊಂದಿದ ಎರಡನೆಯ ತಾಲೂಕು ಇದಾಗಿದೆ. ಜಾಗತೀಕರಣದ ಪ್ರಭಾವದಿಂದಾಗಿ ಇಂದು ಈ ತಾಲೂಕವು ಕೃಷಿ ಆಧಾರಿತ ದೊಡ್ಡ ಮತ್ತು ಚಿಕ್ಕ ಕೈಗಾರಿಕೆಗಳನ್ನು ಹೊಂದುವುದರ ಮುಖಾಂತರ ಜೀವನೋಪಾಯದ ಮೂಲ ಸೌಕರ್ಯಗಳನ್ನು ಹೊಂದುತ್ತಿದೆ. ಇಲ್ಲಿಯ ಜನತೆ ಕೃಷಿಯೊಂದಿಗೆ ಪಶು ಸಂಗೋಪಣೆಯನ್ನು ಉಪ ಉದ್ಯೋಗವನ್ನಾಗಿ ಆರಿಸಿಕೊಂಡಿದ್ದಾರೆ. ಪ್ರತಿ ಚದುರ ಕಿ. ಮೀ. ಗೆ. ೧೭೫ ಪಶುಗಳು ಇವೆ ಎಂದು ಅಂದಾಜಿಸಲಾಗಿದೆ. ಈ ತಾಲೂಕಿನ ಜನರು ಹಸು, ಎಮ್ಮೆ, ಕುರಿ, ಆಡು, ಕೋಳಿ ಮುಂತಾದ ಪ್ರಾಣಿಗಳನ್ನು ಸಾಕುತ್ತಾರೆ. ಈ ಪ್ರದೇಶ ಕುರಿ ಸಾಕಾಣಿಕೆಗೆ ಆದರ್ಶಪ್ರಾಯವಾದ ಸ್ಥಳ ಎಂದೇ ಗುರುತಿಸಿ ಕೊಂಡಿದ್ದು ಸುಮಾರು ಒಂದು ಲಕ್ಷಕ್ಕಿಂತ ಹೆಚ್ಚಿನ ಕುರಿಗಳನ್ನು ನಾವು ಇಲ್ಲಿ ಕಾಣಬಹುದು. ಸರ್ಕಾರ ಡೆಕ್ಕಣ್ಣಿನ ಕುರಿ ತಳಿಗಳನ್ನು ಪೂರೈಸಿ ಇಲ್ಲಿಯ ಸಣ್ಣ ಹಿಡುವಳಿದಾರರಿಗೆ ಕುರಿ ಸಾಕಾಣಿಕೆಯ

ತಿಳುವಳಿಕೆ ಮತ್ತು ತರಬೇತಿಯಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮುಖಾಂತರ ಪ್ರಾಣಿಗಳಿಗೆ ಬರುವ ರೋಗ ರುಜಿನಗಳನ್ನು ತಡೆಯುವಲ್ಲಿ ಅನುಸರಿಸುವ ಕ್ರಮಗಳ ಬಗ್ಗೆ ಮಾಹಿತಿಯನ್ನು ನೀಡಿ ಪಶು ಅಭಿವೃದ್ಧಿಗೆ ಉತ್ತೇಜನ ಕೊಡುತ್ತಿದ್ದಾರೆ. ಈ ತಾಲೂಕಿನ ಒಟ್ಟು ೪,೬೬೩ ಹೆಕ್ಟೇರ ಭೂಮಿಯಲ್ಲಿ ಮೇವಿನ ಬೆಳೆಗಳನ್ನು ಬೆಳೆಯುವುದರೊಂದಿಗೆ ಪಶು ಸಂಗೊಪಣೆ ಮತ್ತು ಹೈನುಗಾರಿಕೆಗೆ ಉತ್ತೇಜನ ನೀಡಿ ತಾಲೂಕಿನಲ್ಲಿ ಉತ್ಪಾದನೆಯಾಗುವ ಹಾಲು ಮತ್ತು ಹಾಲಿನ ಉತ್ಪನ್‌ಗಳ ಸಂಗ್ರಹಣೆಗೆ ಶೈತ್ಯಾಗಾರಗಳನ್ನು ಸ್ಥಾಪಿಸಿ ಸಂಸ್ಕರಿಸಿದ ಹಾಲಿನ ಉತ್ಪನ್ನಗಳನ್ನು ಹೊರ ಪ್ರದೇಶಗಳಿಗೆ ರವಾನಿಸಲಾಗುತ್ತಿದೆ.

ಚಿಕ್ಕೋಡಿ ತಾಲೂಕು ಸಹಕಾರಿ ರಂಗದಲ್ಲಿ ಮುಂದುವರೆಯುತ್ತಿರುವ ತಾಲೂಕು ಆಗಿದೆ. ಈ ತಾಲೂಕಿನಲ್ಲಿ ೭೦೮ ಸಹಕಾರಿ ಸಂಘಗಳು ಕಾರ್ಯವನ್ನು ನಿರ್ವಹಿಸುತ್ತವೆ. ಕೃಷಿ, ಮತ್ತು ಕೈಗಾರಿಕಾ ಬಳವಣಿಗೆಗೆ ಸಹಕಾರಿ ರಂಗ ಅತೀ ಅವಶ್ಯಕ. ಈ ಸಹಕಾರಿ ರಂಗದ ಮೂಲ ಮಂತ್ರ 'ತಾನು ಎಲ್ಲರಿಗಾಗಿ ಎಲ್ಲರೂ ತನಗಾಗಿ' ಎಂದು ಇದೆ. ಬಂಡವಾಳಶಾಹಿ ನ್ಯೂನ್ಯತೆಗಳನ್ನು ಹೊಡೆದೋಡಿಸುವ ದಿಶೆಯಲ್ಲಿ ಈ ಎಲ್ಲ ಸಹಕಾರಿ ಸಂಘಗಳು ಗಮನಾರ್ಹವಾದ ಸೇವೆ ಸಲ್ಲಿಸುತ್ತಿವೆ. ಒಟ್ಟಾರೆ ಸಹಕಾರಿ ಸಂಘಗಳಲ್ಲಿ ೬೫ ಒಕ್ಕಲುತನ ಪತ್ತಿನ ಸಹಕಾರಿ ಸಂಘ ೨೧೦ ಕೃಷಿಯೇತರ ಸಹಕಾರಿ ಸಂಘಗಳಿದ್ದು ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಮತ್ತು ಕೃಷಿ ಚಟುವಟಿಕೆಗಳಿಗೆ ಸ್ವ ಉದ್ಯೋಗಕ್ಕೆ ಧನ ಸಹಾಯ ನೀಡುತ್ತಿವೆ. ತಾಲೂಕಿನಲ್ಲಿ ೪ ಒಕ್ಕಲುತನ ಮಾರುಕಟ್ಟೆ ಸಹಕಾರಿ ಸಂಘಗಳು ಅಸ್ತಿತ್ವದಲ್ಲಿವೆ. ೨ ನಿಯಂತ್ರಿತ ಮಾರುಕಟ್ಟೆಗಳು ಇವೆ. ೩೯ ಸಹಕಾರಿ ಸಮುಘಗಳ ಗೋದಾಮುಗಳನ್ನು ಸ್ಥಾಪಿಸಲಾಗಿದೆ. ಈ ತಾಲೂಕಿನಲ್ಲಿ ೬ ಪಟ್ಟಣ ಸಹಕಾರಿ ಬ್ಯಾಂಕಗಳು ೧೧೩ ಇತರೇ ಪತ್ತಿನ ಸಹಕಾರಿ ಸಂಘಗಳು ಮತ್ತು ಒಂದು ಪ್ರಾಥಮಿಕ ಕೃಷಿ ಹುಟ್ಟುವಳಿ ಮಾರಾಟ ಸಹಕಾರಿ ಸಂಘವನ್ನು ಹೊಂದಿದೆ. ೩ ಬಹು ರಾಜ್ಯ ಮಟ್ಟದ ಸಹಕಾರಿ ಸಂಘ ಒಂದು ಪ್ರಾಥಮಿಕ ಕೃಷಿ ಅಭಿವೃದ್ಧ ಮತ್ತು ಗ್ರಾಮೀಣ ಬ್ಯಾಂಕು, ೩೨ ನೌಕರರ ಪತ್ತಿನ ಸಹಕಾರಿ ಸಂಘ, ೧೦ ಎಣ್ಣೆಯ ಬೀಜ ಬೆಳೆಗಾರರ ಸಹಕಾರಿ ಸಂಘ ೨೩ ಲೈವ ಸ್ಟಾಕ ಸಹಕಾರಿ ಸಂಘ, ೬೩ ಹಾಲು ಉತ್ಪಾದಕರ ಸಹಕಾರಿ ಸಂಘ ೪ ಸಂಯುಕ್ತ ಬೇಸಾಯ ಸಹಕಾರಿ ಸಂಘಗಳು ೩ ಏತ ನೀರಾವರಿ ಸಹಕಾರಿ ಸಂಘಗಳು, ೨೩ ನೀರು ಬಳಕೆದಾರರ ಸಹಕಾರಿ ಸಂಘಗಳು, ೩ ಮೀನಗಾರಿಕಾ ಸಹಕಾರಿ ಸಂಘಗಳು, ೩೨ ನೇಕಾರರ ಸಹಕಾರಿ ಸಂಘಗಳು, ೫ ಇತರೇ ಕೈಗಾರಿಕಾ ಸಹಕಾರಿ ಸಂಘಗಳು, ೬ ಕೈಗಾರಿಕಾ ಸಹಕಾರಿ ಸಂಘಗಳು, ೨೮ ಗ್ರಾಹಕರ ಸಹಕಾರ ಸಂಘಗಳು, ೯ ಗೃಹ ನಿರ್ಮಾಣ ಸಹಕಾರಿ ಸಂಘಗಳು ೨ ಕೂಲಿಕಾರರ ಸಹಕಾರಿ ಸಂಘಗಳು ೪೨ ವಿವಿಧೋದ್ದೇಶ ಸಹಕಾರಿ ಸಂಘಗಳು, ೨ ವಿಧ್ಯಾರ್ಥಿ ಗ್ರಾಹಕರ ಸಹಕಾರಿ ಸಂಘಗಳು, ೩೯ ಮಹಿಳಾ

ಸಹಕಾರ ಸಂಘಗಳು, ೨೨ ಮಹಿಳಾ ವಿವಿದೋದ್ದೇಶ ಸಹಕಾರಿ ಸಂಘಗಳು ೧ ಬಡತನ ಸಹಕಾರಿ ಸಂಘ, ೧ ಚರ್ಮ ಹದಮಾಡುವವರ ಸಹಕಾರಿ ಸಂಘ ೨ ಸಾರಿಗೆ ಸಹಕಾರಿ ಸಂಘಗಳು, ೧ ಸರಕಾರಿ ಮುದ್ರಣಾಲಯ ಸಂಘ, ೧ ಉಣ್ಣೆ ನೇಕಾರರ ಸಂಘ, ೫ ಇತರೇ ಸಹಕಾರಿ ಸಂಘಗಳನ್ನು ಈ ತಾಲೂಕವು ಹೊಂದಿದೆ. ಈ ಸಹಕಾರ ಸಂಘಗಳು ಚಿಕ್ಕೋಡಿ ತಾಲೂಕಿನ ಔದ್ಯೋಗಿಕ ಮತ್ತು ಆರ್ಥಿಕ ನೆಲಗಟ್ಟನ್ನು ನಿರ್ಮಿಸುವಲ್ಲಿ ಪ್ರಮುಖವೆನಿಸಿವೆ."[೨]

ಚಿಕ್ಕೋಡಿ ತಾಲೂಕಿನಲ್ಲಿ ಸಹಕಾರ ರಂಗದ ಬೆಳವಣಿಗೆಗೆ ಅತೀ ಶ್ರಮ ವಹಿಸಿದ ಮತ್ತು ಸಹಕಾರಿ ರಂಗದ "ಭೀಷ್ಮ" ಎಂದೇ ಕರೆಯಿಸಿಕೊಳ್ಳುವ ಶ್ರೀ ಶಾಂತಪ್ಪಣ್ಣಾ ಮಿರ್ಜೆ ಅವರು ಪ್ರಮುಖರಾಗಿದ್ದಾರೆ. ಇವರು ಸಹಕಾರಿ ಕ್ಷೇತ್ರದಲ್ಲಿ ಅಗಾಧವಾದ ಸೇವೆ ಗೈಯ್ಯುವದರ ಜೊತೆಗೆ ಚಿಕ್ಕೋಡಿ ತಾಲೂಕಿನ ಜನತೆಗೆ ಸಂಪೂರ್ಣ ಚಿರಪರಿತರಾಗಿದ್ದಾರೆ. ಚಿಕ್ಕೋಡಿ ತಾಲೂಕಿಗೆ ಇವರು ಸಹಕಾರಿ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆ ಅಪಾರ ಮತ್ತು ಅನನ್ಯ ಎಂದೇ ಹೇಳಬಹುದು. ಸಹಕಾರಿ ಕ್ಷೇತ್ರದ ಮಹರ್ಷಿ ಎಂದು ಗುರುತಿಸಲ್ಪಡುವ ಶ್ರೀ ಶಾಂತಪ್ಪಣ್ಣಾ ಮಿರ್ಜೆಯವರು ಸಹಕಾರಿ ರಂಗ ಒಂದೇ ಅಲ್ಲದೆ ಧಾರ್ಮಿಕ, ಶೈಕ್ಷಣಿಕ, ಔದ್ಯೋಗಿಕ ಕ್ಷೇತ್ರಕ್ಕೂ ತಮ್ಮ ಕೊಡುಗೆಯನ್ನು ಸಲ್ಲಿಸಿದ್ದಾರೆ. 'ಆಡು ಮುಟ್ಟದ ಸೊಪ್ಪಿಲ್ಲ. ಶ್ರೀ ಶಾಂತಪ್ಪಣ್ಣಾ ಮಿರ್ಜೆಯವರು' ಕಾರ್ಯ ಮಾಡದ ಕ್ಷೇತ್ರವಿಲ್ಲ' ಎಂಬುದು ಅವರ ಕಾರ್ಯ ಸಾಧನೆಯನ್ನು ಅವಲೋಕಿಸಿದಾಗ ಕಂಡು ಬರುವದು. ಇವರು ಅನೇಕ ಸಂಘ ಸಂಸ್ಥೆಗಳನ್ನು ಕಟ್ಟಿ ಜನರ ಆರ್ಥಿಕ, ಸಾಮಾಜಿಕ, ಔದ್ಯೋಗಿಕ ಮತ್ತು ಶೈಕ್ಷಣಿಕ ಬದಲಾವಣೆಗಳ ಹರಿಕಾರರಾಗಿದ್ದಾರೆ. ಇದೇ ಜುಲೈ ೩೧ ರಂದು ಅವರು ತಮ್ಮ ೮೮ನೇ ವಸಂತಕ್ಕೆ ಪಾದಾರ್ಪಣೆ ಮಾಡಿದ ವಯೋವೃದ್ಧರು ಜ್ಞಾನವೃದ್ಧರು. ಈ ಇಳಿ ವಯಸ್ಸಿನಲ್ಲಿಯೂ ಏನಾದರೂ ಹೊಸದನ್ನು ಹುಟ್ಟು ಹಾಕಬೇಕೆಂಬ ವಿಚಾರಗಳನ್ನು ಇವರು ನಿರಂತರವಾಗಿ ಅವಲೋಕಿಸುತ್ತಿರುತ್ತಾರೆ."[೩] ಇವರು ಕಟ್ಟಿ ಬೆಳೆಸಿದ ದಿ ಚಿಕ್ಕೋಡಿ ಅರ್ಬನ ಬ್ಯಾಂಕ ಬೆಳಗಾವಿ ಜಿಲ್ಲೆಯ ವಿವಿದೆಡೆ ೧೪ ಕಕ್ಕೂ ಹೆಚ್ಚು ಶಾಖೆಗಳನ್ನು ಹೊಂದಿ ಇಂದಿನವರೆಗೂ ಅ ವಿರೋಧ ಪದ್ಧತಿಯಲ್ಲಿ ನಿರ್ದೇಶಕರು ಆಡಳಿತ ಮಾಡುತ್ತಾ ಬಂದಿದ್ದಾರೆ. ಇಂತಹ ಬ್ಯಾಂಕಿಗೆ ಇವರ ಹೆಸರನ್ನು ಇಡುವುದರ ಮೈಲಕ ಅವರ ಸಹಕಾರಿ ಕಾರ್ಯಕ್ಕೆ ಗೌರವಾರ್ಪಣೆಯನ್ನು ಸಲ್ಲಿಸಲಾಗಿದೆ. ತಮ್ಮ ಜೀವನವನ್ನು ಸ್ವಾರ್ಥಕ್ಕಾಗಿ ಇಡದೇ ಇತರರ ಏಳ್ಗೆ ಮತ್ತು ಸರ್ವರ ಬೆಳವಣಿಗೆಗಾಗಿ ಇವರು ಸಹಕಾರಿ ಕ್ಷೇತ್ರದಲ್ಲಿ ಕೈಕೊಂಡ ಕಾರ್ಯಗಳು ಜನ-ಮನ ಮತ್ತು ಸಮಾಜಕ್ಕೆ ನರಂತರ ಕೊಡುಗೆ ಎಂದೆನಿಸಿವೆ. ಇವರು ತಮ್ಮನ್ನು ಸಹಕಾರಿ ರಂಗದಲ್ಲಿ ತೊಡಗಿಸಿಕೊಂಡು ರೈತ ಮತ್ತು ಸಾಮಾನ್ಯ ವರ್ಗದ ಜನತೆಯ ಸಮಸ್ಯೆಗಳಿಗೆ ಸ್ಪಂದಿಸಲು ಚಿಕ್ಕೋಡಿ ನಗರದಲ್ಲಿ ತಮ್ಮ ಸೇವೆಯನ್ನು ಕೈಕೊಂಡಿದ್ದು ಅವು ಈ ಕೆಳಗಿನಂತಿವೆ.

*೧) ದಿ ಚಿಕ್ಕೋಡಿ ಅರ್ಬನ ಕೊ-ಆಪ್-ಬಾಂಕ ಲಿ. ಚಿಕ್ಕೋಡಿ ಇದನ್ನು ೧೯೬೧ರಲ್ಲಿ ಸ್ಥಾಪಿಸಿ ಅನೇಕ ವರ್ಷಗಳವರೆಗೆ ಅಧ್ಯಕ್ಷರಾಗಿ ಇಂದು ಅದರ ದಿಗ್ದರ್ಶಕರಾಗಿದ್ದಾರೆ.

*೨) ಜಿಲ್ಲೆಯ ಪ್ರತಿಷ್ಠಿತ ಸಕ್ಕರೆ ಕಾರ್ಖಾನೆಯಾದ ಶ್ರೀ ದೂಧಗಂಗಾ ಕೃಷ್ಣಾ ಸಹಕಾರಿ ಸಕ್ಕರೆ ಕಾರ್ಖಾನೆಯ ಚಿಪ್ ಪ್ರಮೋಟರ ಆಗಿ, ಅಧ್ಯಕ್ಷರಾಗಿ ಸೇವೆ ಸಲ್ಲಿಸಿ ಇಂದಿನ ವರೆಗೂ ಅವರು ದಿಗ್ದರ್ಶಕರಾಗಿದ್ದಾರೆ.

*೩) ಚಿಕ್ಕೋಡಿ ತಾಲೂಕಾ ಪ್ರಾಥಮಿಕ ಕೃಷಿ ಮತ್ತು ಭೂ ಅಭಿವೃದ್ಧಿ ಬ್ಯಾಂಕಿನ ಸಂಸ್ಥಾಪಕರಾಗಿ ಅನೇಕ ವರ್ಷ ಅಧ್ಯಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

*೪) ಅದೇ ರೀತಿ ಮಹಾವೀರ ಸಹಕಾರಿ ನೂಲಿನ ಗಿರಣಿಯ ಸಂಸ್ಥಾಪಕ ಅಧ್ಯಕ್ಷರಾಗಿ ಕಾರ್ಯ ಕೈಕೊಂಡಿದ್ದಾರೆ.

*೫) ದಿ ಚಿಕ್ಕೋಡಿ ತಾಲೂಕಾ ಮೋಡರ ಟ್ರಾನ್ಸಪೋಟ್ ಕೊ-ಆಪ್ ಸೊಸಾಯಿಟಿಯ ಸಂಸ್ಥಾಪಕ ಅಧ್ಯಕರಾಗಿ ಈಗಲೂ ಅದರ ಮಾರ್ಗದರ್ಶಕರಾಗಿದ್ದಾರೆ.

*೬) ದಿ ಚಿಕ್ಕೋಡಿ ತಾಲೂಕಾ ರೂರಲ್ ಇಂಡಸ್ಟ್ರೀಯಲ್ ಸೊಸಾಯಿಟಿಯ ಸಂಸ್ಥಾಪಕರಾಗಿ, ಅಧ್ಯಕ್ಷಕರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ.

*೭) ದಿ ಚಿಕ್ಕೋಡಿ ತಾಲೂಕಾ ಅಗ್ರಿಕಲ್ಚರ್ ಕೊ-ಆಪ್ ಡೆವಲಫಮೆಂಟ ಸೊಸಾಯಿಟಿಯ ಸಂಸ್ಥಾಪಕರಾಗಿ, ನಿರ್ದೇಶಕರಾಗಿ ಇಪ್ಪತ್ತು ವರ್ಷಗಳವರೆಗೆ ಸೇವೆ ಸಲ್ಲಿಸಿದ್ದಾರೆ.

*೮) ರೈತ ಕೊ-ಆಪ್ ಗೇನ ಬ್ಯಾಂಕಿನ ಸಂಸ್ಥಾಪಕರಾಗಿ, ಅಧ್ಯಕ್ಷರಾಗಿ ಸೇವೆ ಗೈದಿದ್ದಾರೆ.

*೯) ಕೇರೂರ ಜಾಯಿಂಟ ಫಾರ್ಮಿಂಗ ಸೊಸಾಯಿಟಿಯ ದಿಗ್ದರ್ಶಕರಾಗಿ ಮತ್ತು ಅಕ್ಕೋಳದ ತಂಬಾಕು ಖರೀದಿ, ವಿಕ್ರಿ ಸಹಕಾರಿ ಸಂಘದ ಸಲಹೆಗಾರರಾಗಿ, ಕರ್ನಾಟಕ ಅಪೆಕ್ಸ ಬ್ಯಾಂಕಿನ ದಿಗ್ದರ್ಶಕರಾಗಿ, ಬೆಳಗಾವಿ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕಿನ ದಿಗ್ದರ್ಶಕರಾಗಿ ಸೇವೆ ಸಲ್ಲಿಸಿದಾರೆ.

ಇಷ್ಟೇ ಅಲ್ಲದೇ ಇವರು ದಿ ಶಾಂತಪ್ಪಣ್ಣ ಮಿರ್ಜಿ ಅರ್ಬನ ಬ್ಯಾಂಕ್,ಲಿಬರಲ್ ಬ್ಯಾಂಕ್, ಬ್ರಹ್ಮನಾಥ ಸೌಹಾರ್ದ ಸಂಸ್ಥೆ, ಮಹಾಲಕ್ಷೀ ಸೌಹಾರ್ದ, ಬೀರೇಶ್ವರ ಸೌಹಾರ್ದ ,ಅರಿಹಂತ ಸೌಹಾರ್ದ, ಲಕ್ಷೀ ಸೌಹಾರ್ದ ಮುಂತಾದ ಸಹಕಾರಿ ಪತ್ತಿನ ಸಂಘಗಳ ಆರ್ಥಿಕ ಅಭಿವೃದ್ಧಿಗೆ ತಮ್ಮ ವಿಶಿಷ್ಟ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ. ಈ ರೀತಿಯಾಗಿ ಚಿಕ್ಕೋಡಿ ತಾಲೂಕಿನ ಆರ್ಥಿಕ ಅಭಿವೃದ್ಧಿಯಲ್ಲಿ ಶ್ರೀ ಶಾಂತಪ್ಪಣ್ಣಾ ಮಿರ್ಜಿಯವರ ಕೊಡುಗೆ ಅಪಾರವಾದುದು.

ಸಹಕಾರಿ ರಂಗದ ಅಭಿವೃದ್ಧಿ ತಾಲೂಕಿನ ಆರ್ಥಿಕ ಸ್ಥಿತಿಗಳ ನಿಂಯತ್ರಣ ಮತ್ತು ಜನತೆಯ ಆರ್ಥಿಕ ಸಂಕಷ್ಟಕ್ಕೆ ಸ್ಪಂದಿಸುವ ಚಿಕ್ಕೋಡಿ ತಾಲೂಕಿನ ಸಹಕಾರಿ ಸಂಘಗಳು ಮತ್ತು ಸಹಕಾರಿ ಬ್ಯಾಂಕುಗಳ ಕಾರ್ಯವನ್ನು ಇಲ್ಲಿ ಶ್ಲಾಘಿಸಬಹುದು. ಬ್ಯಾಂಕಿಂಗ್ ವಲಯದಲ್ಲಿ ಈ ತಾಲೂಕು ಅಗಾಧವಾದ ಬೆಳವಣಿಗೆಯನ್ನು ಹೊಂದಿದ್ದು ಸುಮಾರು ನತ್ತೆರಡಕ್ಕಿಂತ ಅಧಿಕ ವಾಣಿಜ್ಯ ಬ್ಯಾಂಕುಗಳನ್ನು ಚಿಕ್ಕೋಡಿ ತಾಲೂಕು ಹೊಂದಿದೆ. ಈ ವಾಣಿಜ್ಯ ಬ್ಯಾಂಕುಗಳು ೧.೮೧ ಕೋಟಿಗಿಂತ ಅಧಿಕ ಠೇವಣಿಯನ್ನು ಸಂಗ್ರಹಿಸಿ ವಿವಿಧ ಉದ್ದೇಶಗಳ ಕಾರ್ಯಗಳಿಗೆ ಮತ್ತು ಜನತೆಯ ಸಂಕಷ್ಟಗಳಿಗೆ ಸಾಲ ಸೌಲಭ್ಯಗಳನ್ನು ಒದಗಿಸುವದರೊಂದಿಗೆ ಜನತೆಯೊಂದಿಗೆ ನೇರ ಸಭಂದವನ್ನು ಹೊಂದಿ ಜನರ ಆಗು ಹೋಗುಗಳಿಗೆ ಸ್ಪಂಧಿಸುತ್ತಿವೆ.

ಇದರ ಹೊರತಾಗಿ ಕರ್ನಾಟಕ ಸರಕಾರವು ಚಿಕ್ಕೋಡಿ ತಾಲೂಕಿನಲ್ಲಿ ಆರ್ಥಿಕವಾಗಿ ಹಿಂದುಳಿದವರ ಅಭಿವೃಧ್ಧಿಗಾಗಿ ಅನೇಕ ಯೋಜನೆಗಳನ್ನು ಅನುಷ್ಠಾನಗೊಳಿಸಿದೆ.

ಉದಾಹರಣೆ:-ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಅಡಿಯಲ್ಲಿ ೧.೦೫೫ ಜನರಿಗೆ ಸಹಾಯವನ್ನು ನೀಡಿದೆ. ನೂರು ಬಾವಿಗಳ ಯೋಜನೆ ಅಡಿಯಲ್ಲಿ ೭೧ ಫಲಾನುಭವಿಗಳಿಗೆ ಆರ್ಥಿಕ ಸಹಕಾರವನ್ನು ಮತ್ತು 'ಟ್ರೈಸಂ' ಯೋಜನೆ ಅಡಿಯಲ್ಲಿ ೧೦೦ ಜನರಿಗೆ ತರಬೇತಿಯನ್ನು ನೀಡುವುದರ ಮುಖಾಂತರ ಸ್ವ ಉದ್ಯೋಗ ಮತ್ತು ಆರ್ಥಿಕ ಸಹಾಯವನ್ನು ಒದಗಿಸಿದೆ.

ಡಾ॥ ಬಿ.ಆರ್.ಅಂಬೇಡ್ಕರ ರವರ ಜನ್ಮ ಶತದಿನೋತ್ಸವ ಸಂದರ್ಭದಲ್ಲಿ ೩೭೯ ಮನೆಗಳನ್ನು ಮತ್ತು ಆಶ್ರಯ ಯೋಜನೆಯಡಿ ೧೬೪ ಮನೆಗಳನ್ನು ಕಟ್ಟಿಸಿಕೊಟ್ಟಿದೆ. ಅದೇ ಪ್ರಕಾರ ತಾಲೂಕಿನಲ್ಲಿ ಜವಾಹರ ರೋಜಗಾರ ಯೋಜನೆಯಡಿ ಕೆಲಸವನ್ನು ಕಲ್ಪಿಸಿ ಕೊಡುವುದರ ಮುಖಾಂತರ ಜನರು ಆರ್ಥಿಕವಾಗಿ ಹಿಂದುಳಿಯದಂತೆ ನೋಡಿಕೊಳ್ಳಲಾಗುತ್ತಿದೆ. ಆರ್ಥಿಕವಾಗಿ ಹಿಂದುಳಿದ ಹಾಗೂ ಬಡತನ ರೇಖೆಗಿಂತ ಕೆಳಗಿರುವ ಸುಮಾರು ೨೦೦೦ ಜನ ವಿಧವಾ ಮತ್ತು ಅಂಗವಿಕಲ ಮಾಶಾಸನವನ್ನು ಪಡೆದುಕೊಳ್ಳುವುದರ ಮುಖಾಂತರ ಸಾಮಾಜಿಕ ಜೀವನವನ್ನು ನಡೆಸುತ್ತಿದ್ದಾರೆ. ಈ ರೀತಿಯಾಗಿ ಚಿಕ್ಕೋಡಿ ತಾಲೂಕವು ಕರ್ನಾಟಕದಲ್ಲಿ ಆರ್ಥಿಕವಾಗಿ ಮುಂದುವರೆಯುತ್ತಿರುವ ತಾಲೂಕು ಎಂದೆನಿಸಿದೆ.

# ಗ್ರಂಥ ಋಣ

| ಕೃತಿ | ಸಂಪಾದಕರು | ಪ್ರಕಟನೆ ವರ್ಷ | ಪುಟ |
|---|---|---|---|
| '೧' ಚಿಕ್ಕೋಡಿ ತಾಲೂಕಾ ದರ್ಶನ | ಶ್ರೀ. ಮದನ್ ದೊಡಮನಿ | ೧೯೮೬ | ೩ |
| '೨' ಚಿಕ್ಕೋಡಿ ತಾಲೂಕಿನ ವಿವಿಧ ಸಹಕಾರಿ ಸಂಘಗಳ ಯಾದಿ | ಸಹಕಾರಿ ಸಂಘಗಳ ನೋಂದಣಾಧಿಕಾರಿಗಳ ಕಾರ್ಯಾಲಯ, ಚಿಕ್ಕೋಡಿ | ೩೧/೩/೦೮ | |
| '೩' ಸಮಾಜ ಭೂಷಣ ಶ್ರೀ. ಶಾಂತಪ್ಪಣ್ಣ ಮಿರ್ಜಿ | ಡಾ. ಪಿ. ಜಿ. ಕೆಂಪಣ್ಣವರ | ೧೯೯೪ | ೨೦ |

# ಅಧ್ಯಾಯ ~ ೬

## ಚಿಕ್ಕೋಡಿ ತಾಲೂಕಿನ ಶೈಕ್ಷಣಿಕ ಚರಿತ್ರೆ



# "ಚಿಕ್ಕೋಡಿ ತಾಲೂಕಿನ ಶೈಕ್ಷಣಿಕ ಚರಿತ್ರೆ"

ಒಂದು ಪ್ರದೇಶ ನಾಡು, ನುಡಿ ಹಾಗೂ ಆ ಪ್ರದೇಶದ ಜನತೆಯ ಮಾನಸಿಕ ಬೆಳವಣಿಗೆ ಮತ್ತು ಬದುಕುವ ಶೈಲಿಯೊಂದಿಗೆ ಜನರ ಪ್ರತಿನಿತ್ಯದ ಬಾಳುವ ಬದುಕಿನ ಮುಖವನ್ನು ಅವಲೋಕಿಸಿದಾಗ ಆ ಮನುಷ್ಯನಲ್ಲಿ ಹುದುಗಿರುವ ಆಚಾರ ವಿಚಾರಗಳು ಆ ವ್ಯಕ್ತಿಯ ವ್ಯಕ್ತಿತ್ವವನ್ನು ನಿರ್ಧರಿಸುತ್ತವೆ. ಒಬ್ಬ ಸುಜ್ಞಾನಿ ವ್ಯಕ್ತಿ ತನ್ನ ಜ್ಞಾನವನ್ನು ಸಮಾಜಕ್ಕೆ ತೋರಿಸಬೇಕಾದರೆ ಆ ವ್ಯಕ್ತಿಯು ತನ್ನಲ್ಲಿ ಹೊಂದಿರುವ ವಿಚಾರಗಳು ಆತನ ಶೈಕ್ಷಣಿಕ ಗುಣಮಟ್ಟವನ್ನು ತಿಳಿಯ ಪಡಿಸುತ್ತವೆ.

ಅಜ್ಞಾನದ ಅಂಧಕಾರದಲ್ಲಿ ಮುಳುಗಿದ ಸಮಾಜವನ್ನು ಸುಜ್ಞಾನದ ದೀವಿಗೆಯೆಡೆಗೆ ಕೊಂಡೊಯ್ಯುವದೇ ಶಿಕ್ಷಣ. ಭಾರತ ಒಂದು ಸಂಪ್ರದಾಯಶೀಲ ದೇಶ. ಹಿಂದಿನ ಕಾಲದಿಂದಲೂ ಇಲ್ಲಿ ಸಾಂಪ್ರದಾಯಿಕ ಬದ್ಧವಾದ ಶಿಕ್ಷಣವನ್ನು ಪಡೆದುಕೊಳ್ಳುವ ಪದ್ಧತಿ ಮತ್ತು ಆ ಶಿಕ್ಷಣವು ಕೆಲವೇ ಸಮಾಜದ ಜನರಿಗೆ ತಲುಪುವಂತಿತ್ತು. ಅಂತಹ ಶಿಕ್ಷಣವನ್ನು ನಿರ್ದಿಷ್ಟ ಪ್ರದೇಶಗಳಲ್ಲಿ ಒದದಗಿಸಿ ಕೊಡಲಾಗುತ್ತಿತ್ತು. ಆ ಪ್ರದೇಶಗಳೆಂದರೆ 'ಬ್ರಹ್ಮಪುರಿಗಳು. ಅಗ್ರಹಾರಗಳು, ಮಠಗಳು ಮತ್ತು ಮಂದಿರಗಳು' ಕೆಲವೇ ಸಮುದಾಯದ ಜನರಿಗೆ ಜ್ಞಾನವನ್ನು ಒದಗಿಸುವ ಶೈಕ್ಷಣಿಕ ಕೇಂದ್ರಗಳಾಗಿದ್ದವು. ಅಂತಹ ಶೈಕ್ಷಣಿಕ ಕೇಂದ್ರಗಳಿಗೆ ಚಿಕ್ಕೋಡಿ ತಾಲೂಕವು ಹೊರತಾದುದೇನಲ್ಲ.

ಚಾರಿತ್ರಿಕ ದಾಖಲೆಗಳನ್ನು ಅವಲೋಕಿಸುತ್ತಾ ಹೋದಂತೆ ಚಿಕ್ಕೋಡಿ ತಾಲೂಕಿನ ಕಬ್ಬೂರವು ಸವದತ್ತಿ ರಟ್ಟರ ಕಾಲದಲ್ಲಿ ಒಂದು ಅಗ್ರಹಾರವಾಗಿತ್ತು ಎಂದು ಶಕೆ ೧೦೨೬ರ ಶಿಲಾಶಾಸನ ತಿಳಿಯಪಡಿಸುತ್ತದೆ. ಈ ಅಗ್ರಹಾರದಲ್ಲಿ ಹಲವಾರು ವಿದ್ಯಾರ್ಥಿಗಳು ಅಧ್ಯಯನವನ್ನು ಕೈಗೊಳ್ಳುತ್ತಿದ್ದರು ಎಂಬುದನ್ನು ತಿಳಿಯಬಹುದಾಗಿದೆ. ಇದೇ ರೀತಿಯಾಗಿ ತಾಲೂಕಿನ ಕೇರೂರ, ಖಡಕಲಾಟ, ಪಟ್ಟಣಕುಡಿ ಗ್ರಾಮಗಳು ವೈದಿಕ ಅಧ್ಯಯನ ಕೇಂದ್ರಗಳಾಗಿದ್ದವು ಎಂದು ಯಕ್ಸಂಬಿಯ ಶಿಲಾಶಾಸನದಿಂದ ತಿಳಿದುಬರುತ್ತದೆ. ಚಿಕ್ಕೋಡಿ ಎಂದು ಹಿಂದಿನ ಕಾಲದಿಂದಲೂ ಭೌಗೋಳಿಕ ಸೌಂಧರ್ಯದ ಜೊತೆಗೆ ಧಾರ್ಮಿಕ, ಶೈಕ್ಷಣಿಕ ಬೆಳವಣಿಗೆಯನ್ನು ಹೊಂದಿದ್ದರಿಂದ ಇಲ್ಲಿಗೆ ಶ್ರೇಷ್ಠ ಭೌಗೋಳಿಕ ತಜ್ಞರಾದ 'ಒಗ್ಲಿಬಿ' ಮತ್ತು 'ಕ್ಯಾಪ್ಟನ್. ಮುರ್' ಎಂಬುವರು ಕ್ರಿ. ಶ. ೧೬೮೦ ರಲ್ಲಿ ಕ್ಯಾ. ಮುರ

ಮತ್ತು ಕ್ರಿ. ಶ. ೧೭೨೦ ರಲ್ಲಿ ಕ್ಯಾಪ್ಟನ್. ಕ್ಲೂನ್ಸ ಎಂಬುವರು ಚಿಕ್ಕೋಡಿ ಪ್ರದೇಶಕ್ಕೆ ಭೆಟ್ಟಿಯನ್ನು ಇತ್ತು ಇದರ ವಿವರಣೆಗಳನ್ನು ನೀಡಿದ್ದಾರೆ ಎಂಬುದನ್ನು ನಾವು ದಾಖಲೆಗಳಿಂದ ತಿಳಿಯಬಹುದಾಗಿದೆ.

ಮಕ್ಕಳನ್ನು ಬಹುದಿನ ನಿರ್ವಹಣೆಗಾಗಿ ಸಿದ್ಧಗೊಳಿಸುವದೇ ಶಿಕ್ಷಣವೆಂದು ಶಿಕ್ಷಣ ತಜ್ಞರ ಅಭಿಪ್ರಾಯವಾಗಿದೆ. ಒಬ್ಬ ವ್ಯಕ್ತಿಯ ಅಂತರಾತ್ಮದಲ್ಲಿ ಹುದುಗಿರುವ ಕ್ರಿಯಾತ್ಮಕ ಶಕ್ತಿಗಳನ್ನು ಎಚ್ಚರಗೊಳಿಸಿ ಅವುಗಳಿಗೆ ಯೋಗ್ಯವಾದ ಅವಕಾಶಗಳನ್ನು ಕಲ್ಪಿಸುವದೇ ಶಿಕ್ಷಣದ ಮುಖ್ಯ ಆಶಯವಾಗಿದೆ. ಅವನಿಗೆ ತನ್ನ ಸುತ್ತಮುತ್ತಲಿನ ಸಮಾಜದ ಪರಿಸರದ ಪರಿಚಯ ಮಾಡಿಕೊಡುವುದು ರಾಷ್ಟ್ರದ ಏಳ್ಗೆಯಲ್ಲಿ ಅವನ ಪಾತ್ರವನ್ನು ಸ್ಪಷ್ಟಗೊಳಿಸುವುದು. ತನ್ನ ಭಾಷೆ, ಸಂಸ್ಕೃತಿ, ಭವ್ಯತೆಯನ್ನು ತಿಳಿಸಿಕೊಡುವುದು ಮತ್ತು ಸಮಾಜದ ಜೀವಿಯಾಗಿ ಬದುಕಲು ಬೇಕಾಗುವ ಸದ್ವರ್ತನೆ, ಸದಾಚಾರ, ಸಂಯಮ, ಶಿಸ್ತುಗಳನ್ನು ಅವನಲ್ಲಿ ಹೆಚ್ಚಿಸುವುದು. ನಾಡಿಗಾಗಿ, ನುಡಿಗಾಗಿ ದುಡಿಯುವ ಹಂಬಲ, ತನ್ನ ತಾಯಿನಾಡಿನ ಸಂರಕ್ಷಣೆಗಾಗಿ ತಾನು ಮಾಡುವ ಕರ್ತವ್ಯವೇನು ಎಂಬ ಪ್ರಜ್ಞೆ ಮುಂತಾದ ಶ್ರೇಷ್ಠ ಗುಣಗಳನ್ನು ಬೆಳೆಸಿ ತಾನೂ ಬದುಕಬೇಕು, ತನ್ನೊಂದಿಗೆ ಜನರೂ ಬದುಕಬೇಕೆಂಬ ಪ್ರಜ್ಞೆಯೊಂದಿಗೆ ದೇಶದ ಸರ್ವಾಂಗೀಣ ಪ್ರಗತಿಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸುವುದು. ಎಲ್ಲರನ್ನು ಸಮಾನತೆಯಿಂದ ಕಾಣುವ ದೃಷ್ಟಿಯನ್ನು ತಂದುಕೊಡುವುದು ಆಧುನಿಕ ಕಾಲಕ್ಕೆ ತಕ್ಕಂತೆ ನಡೆದುಕೊಳ್ಳುವ ಶಿಸ್ತು ಬದ್ದತೆಯನ್ನು ಕಲಿಸುವುದು ಶಿಕ್ಷಣದ ಪ್ರಮುಖ ಉದ್ದೇಶವಾಗಿದೆ. ದಿನಗಳು ಉರಿಳಿದಂತೆ ಶಿಕ್ಷಣದ ವ್ಯಾಪ್ತಿ ವಿಸ್ತಾರಗೊಳ್ಳುತ್ತಾ ಸಾಗಿದೆ.

ಭಾರತದ ಅನಾದಿಕಾಲದಿಂದಲೂ ಶಿಕ್ಷಣಕ್ಕೆ ವಿಶೇಷ ಮಹತ್ವವನ್ನು ಕೊಟ್ಟಿರುವುದನ್ನು ಇತಿಹಾಸದ ಪುಟಗಳಲ್ಲಿ ನಾವು ಕಾಣಬಹುದಾಗಿದೆ. ಆದರೆ ಭಾರತಕ್ಕೆ ಯುರೋಪಿಯನ್ನರ ಆಗಮನದ ತರುವಾಯ ಭಾರತದಲ್ಲಿ ಶಾಸನ ಬಧ್ಧ ಶಿಕ್ಷಣಕ್ಕೆ ಅನುವು ದೊರೆಯಲು ಆರಂಭಿಸಿತು. ಅದರಲ್ಲಿಯೂ ವಿಶೇಷವಾಗಿ ಬ್ರಿಟೀಷರ ಕಾಲಾವಧಿಯಲ್ಲಿ ಅಂದರೆ ಕ್ರಿ. ಶ.೧೮೪೫ ರಿಂದ ಶಿಕ್ಷಣದಲ್ಲಿ ಮಹತ್ತರವಾದ ಬದಲಾವಣೆಗಳನ್ನು ಜಾರಿಗೊಳಿಸಿದರು. ಬ್ರಿಟೀಷರು ಸಾರ್ವತ್ರಿಕ ಶಿಕ್ಷಣ ಸುಧಾರಣಾ ಕಾರ್ಯಗಳನ್ನು ಜಾರಿಗೆ ತರುವುದಕ್ಕಿಂತ ಪೂರ್ವದಲ್ಲಿ ಚಿಕ್ಕೋಡಿ ಭಾಗದಲ್ಲಿ ಪೇಶ್ವೆಗಳ ಆಡಳಿತದ ಪ್ರಭಾವದಿಂದಾಗಿ ಈ ಭಾಗ ಮರಾಠಿ ಭಾಷೆಯ ಪ್ರಭಾವಕ್ಕೊಳಗಗಿದ್ದು ಇಲ್ಲಿಯ ಜನರು ತಮ್ಮ ದಿನ ನಿತ್ಯದ ವ್ಯವಹಾರಕ್ಕಾಗಿ ಕನ್ನಡ, ಮೋಡಿ, ನಾಗರಿ ಲಿಪಿಗಳನ್ನು ಅಳವಡಿಸಿಕೊಂಡಿದ್ದರಲ್ಲದೇ ಪೇಶ್ವೆಗಳ ಆಡಳಿತದಲ್ಲಿ 'ಪಂಥೋಜಿ'ಎಂಬ ಶಾಲೆಗಳು ದೊಡ್ಡ ಗ್ರಾಮದಲ್ಲಿ ಇರುತ್ತಿದ್ದವು. ಬ್ರಿಟೀಷ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟ ಮೇಲೆ ಈ ಭಾಗದಲ್ಲಿ ಸರಕಾರಿ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳು ಆರಂಭಿಸಲ್ಪಟ್ಟವು. ಪ್ರಥಮ ಪ್ರಾಥಮಿಕ

ಶಾಲೆಯು ಕ್ರಿ.ಶ ೧೮೧೮ ರಲ್ಲಿ ಚಿಕ್ಕೋಡಿಯಲ್ಲಿ ಆರಂಭವಾಯಿತು. ಕ್ರಿ.ಶ. ೧೮೬೬ ರಲ್ಲಿ ಯಕ್ಸಂಬಾದಲ್ಲಿ ಪ್ರಾಥಮಿಕ ಶಾಲೆಯನ್ನು ತೆರೆಯಲಾಯಿತು. ಆರಂಭಿಕ ದಿನಗಳಲ್ಲಿ ಇಲ್ಲಿಯ ಪ್ರಾಥಮಿಕ ಶಾಲೆಗಳು ಹೆಚ್ಚಿಗೆ ಮರಾಠಿ ಭಾಷೆಯಲ್ಲಿದ್ದವು. ಕ್ರಿ.ಶ. ೧೯೨೦-೨೩ ರ ಕಾಲಾವಧಿಯವರೆಗೆ ಮರಾಠಿ ಭಾಷೆಯ ಪ್ರಭಾವಕ್ಕೊಳಗಾದ ಈ ಪ್ರದೇಶದಲ್ಲಿ ನಂತರ ಕನ್ನಡ ಶಾಲೆಗಳನ್ನು ಆರಂಭಿಸಲಾಯಿತು. ಕ್ರಿ.ಶ. ೧೯೧೯ರಲ್ಲಿ ಚಿಕ್ಕೋಡಿಯಲ್ಲಿ ಮತ್ತು ೧೯೩೦ರಲ್ಲಿ ನಿಪ್ಪಾಣಿಯಲ್ಲಿ ಪ್ರೌಢಶಾಲೆಗಳನ್ನು ಆರಂಭಿಸಲಾಯಿತು. ಆರಂಭಿಕ ದಿನಗಳಲ್ಲಿ ಚಿಕ್ಕೋಡಿಯು ಏಕ ವಲಯ ಶಿಕ್ಷಣಾಧಿಕಾರಿಗಳ ಅಧಿಕಾರದ ವ್ಯಾಪ್ತಿಗೆ ಒಳಪಟ್ಟಿತ್ತು.

ಬ್ರಿಟೀಷರ ಪ್ರಭಾವಕ್ಕೆ ಒಳಗಾದ ಚಿಕ್ಕೋಡಿ ತಾಲೂಕಾ ೧೮೧೮ರಲ್ಲಿ ಬಂದ "ಹಂಟರ ಕಮೀಶನ್, ೧೯೨೩ ರಲ್ಲಿ ಜಾರಿಯಾದ ಹೂರ್ಟಾಗ ಕಮೀಟಿ, ೧೯೩೪ ರಲ್ಲಿ ಸಪ್ರೂ ಕಮೀಟಿ, ೧೯೩೭ರ ಅಬಟವುಡ್ ರಿಪೋರ್ಟ, ೧೯೪೪ರ ಸಾರಾಬಂಟ ರಿಪೋರ್ಟ, ಈ ಸಮಿತಿಗಳು ಬ್ರಿಟೀಷ ಶಿಕ್ಷಣ ಪದ್ಧತಿಯಲ್ಲಿ ಸಾಮಾನ್ಯ ಜನತೆಯನ್ನು ದೂರು ಇಟ್ಟಿದ್ದವು. ಮಹಾತ್ಮಾ ಗಾಂಧೀಜಿಯವರ ನೇತ್ರತ್ವದಲ್ಲಿ ಪ್ರಾರಂಭವಾದ ವರ್ದಾ ಶಿಕ್ಷಣ ಪ್ರಯೋಗದಲ್ಲಿ ಒಂದು ಯೋಗ್ಯ ಶಿಕ್ಷಕರ ಕೊರತೆ, ಅಧಿಕಾರಿಗಳ ಅಲಕ್ಷತನ, ಸರ್ಕಾರದ ನಿಷ್ಕ್ರತೆಗಳಿಂದ ಇದು ಅಯಶಶ್ವಿಯಾಯಿತು. ಆದರೆ ಭಾರತೀಯ ಶೈಕ್ಷಣಿಕ ಬೆಳವಣಿಗೆಯಲ್ಲಿ ರವೀಂದ್ರನಾಥ ಠಾಗೋರರ "ವಿಶ್ವ ಭಾರತಿ ಶೈಕ್ಷಣಿಕ ಪ್ರಯೋಗ"ವೂ ಮಾತ್ರ ಮಹತ್ವದ ಪಾತ್ರ ವಹಿಸಿತು ಎಂದು ಹೇಳಬೇಕಾಗುತ್ತದೆ.

ಶಿಕ್ಷಣ ಕ್ಷೇತ್ರದಲ್ಲಿ ನಂತರದ ದಿನಗಳಲ್ಲಿ ಆದ ಮತ್ತೊಂದು ಹಠಾತ್ ಬೆಳವಣಿಗೆ ಎಂದರೆ ಭಾಷಾ ತತ್ವದ ಆಧಾರದ ಮೇಲೆ ರಾಜ್ಯಗಳನ್ನು ಪುನರ್ ವಿಂಗಡನೆ ಮಾಡಿದಾಗ ಗಡಿ ಭಾಗದ ಪ್ರದೇಶಗಳು ಅಪಾರವಾದ ಸಂಕಷ್ಟಕ್ಕೆ ಸಿಲುಕುವಂತಾಯಿತು. ಈ ಸಮಸ್ಯೆಗಳ ಜಟಿಲತೆಯನ್ನು ಪರಿಹರಿಸಿ ಶಿಕ್ಷಣದಲ್ಲಿ ಸುಧಾರಣೆಯನ್ನು ತರುವುದು ಒಂದು ಮಹತ್ತರ ಕಾರ್ಯವೇ ಎಂದೆಣಿಸಿತು. ಗಡಿ ತಾಲೂಕಾಗಿರುವ ಚಿಕ್ಕೋಡಿ ಈ ಸಮಸ್ಯಗಳಿಗೇನೂ ಹೊರತಾಗಿರಲಿಲ್ಲ.

ಕಲಿತದ್ದನ್ನು ಬದುಕುತ್ತಾ ಹೋಗುವುದೇ ವಿದ್ಯಾಭ್ಯಾಸವಾದರೆ ವಿಚಾರ ಪೂರ್ವಕವಾಗಿ ಮಾಡುವ ಕೆಲಸವೇ ಶಿಕ್ಷಣವಾಗಬೇಕು. ನಮ್ಮ ಅಂತರಂಗದ ಸಂಸ್ಕಾರ ಮಾಡುವದೇ ಶಿಕ್ಷಣದ ಗುರಿಯಾಗಬೇಕು. ವ್ಯಕ್ತಿಯ ವ್ಯಕ್ತಿತ್ವದ ಸರ್ವಾಂಗೀಣ ಅಭಿವೃದ್ದಿಯನ್ನು ಸಾಧಿಸುವ ಶಿಕ್ಷಣ ನಮಗಿಂದು ಬೇಕಾಗಿದೆ. ಗಡಿನಾಡಿನ ತಾಲೂಕಾದ ಶೈಕ್ಷಣಿಕ ಸಮಸ್ಯೆಗಳು ಹತ್ತು ಹಲವಾರು ಈ ತಾಲೂಕಿನಲ್ಲಿ ಪ್ರಾಥಮಿಕ ಶಾಲೆಗಳು ಇಂದು ೫೫೯ ಇದ್ದು ಪ್ರೌಢಶಾಲೆಗಳು ೭೪ ಹಾಗೂ ಮಹಾವಿದ್ಯಾಲಯಗಳ ಸಂಖ್ಯೆ ೧೧ ಮತ್ತು ಸ್ನಾತಕೋತ್ತರ ಅಧ್ಯಯನದ ಕೇಂದ್ರವಿದೆ. ಹತ್ತು ಪದವಿಪೂರ್ವ ಕಾಲೇಜುಗಳು ಇದ್ದು ಒಂದು ತಾಂತ್ರಿಕ ಮಹಾವಿದ್ಯಾಲಯವು ಉಂಟು. ಇದೀಗ ಒಂದು

ಇಂಜನೀಯರಿಂಗ ಆರಂಭವಾಗಿದೆ. ಹಿಂದೊಂದು ದಿನ ಅಂದರೆ ಕ್ರಿ. ಶ. ೧೯೯೭ ರಲ್ಲಿ ಪ್ರತಿಶತ ೫೯% ರಷ್ಟು ಸಾಕ್ಷರರನ್ನು ಹೊಂದಿದ ಈ ತಾಲೂಕು ಇಂದು ಬೆಳಗಾವಿ ಜಿಲ್ಲೆಯಲ್ಲಿ ಅತೀ ಹೆಚ್ಚು ಸಾಕ್ಷರರನ್ನು ಹೊಂದಿದ ತಾಲುಕೂಎಂದೇ ಹೆಸರು ಗಳಿಸಿದೆ. ಅಲ್ಲದೇ ಕ್ರಿ. ಶ. ೨೦೦೫-೦೬, ೨೦೦೬-೦೭ ಮತ್ತು ೨೦೦೭-೦೮ ನೇ ಸಾಲಿನ ರಾಜ್ಯ ಮಟ್ಟದ ಪ್ರೌಢಶಾಲೆಗಳ ೧೦ನೇ ತರಗತಿಯ ವಾರ್ಷಿಕ ಫಲಿತಾಂಶದಲ್ಲಿ ಕರ್ನಾಟಕ ರಾಜ್ಯದಲ್ಲಿಯೇ ಮೊದಲನೆಯ ಸ್ಥಾನ ಪಡೆಯುವದರೊಂದಿಗೆ ಅಲ್ಪಾವಧಿಯಲ್ಲಿ ಈ ತಾಲೂಕಿನ ಶಿಕ್ಷಣದ ಬೆಳವಣಿಗೆಯನ್ನು ನಾವು ಕಾಣಬಹುದಾಗಿದೆ. ಈ ತಾಲೂಕಿನ ಶಿಕ್ಷಣದ ಬೆಳವಣಿಗೆಗೆ ಹಲವಾರು ಜನರ ಅಪಾರ ಪ್ರೇಮ ಶಿಕ್ಷಣ ಸಂಸ್ಥೆಗಳ ಬೆಳವಣಿಗೆಗೆ ಸಹಾಯಕಕಾರಿಯಾಗಿದೆ.

ಚಿಕ್ಕೋಡಿಯಲ್ಲಿ ರಾಮಚಂದ್ರ ಧೋಂಡಿಬಾ ಇವರ ಹೆಸರಿನಲ್ಲಿ ಕ್ರಿ. ಶ. ೧೯೧೯ ರಲ್ಲೊ ಆರ್. ಡಿ. ಶಾಲೆ ಪ್ರಾರಂಭವಾಯಿತು. ಕ್ರಿ. ಶ. ೧೯೬೨ ರಲ್ಲಿ ಚಿಕ್ಕೋಡಿಯ ಲಿಬರಲ್ ಎಜ್ಯಕೇಶನ ಸೊಸಾಯಿಟಿ ಆರಂಭವಾಯಿತು. ಇದರೊಂದಿಗೆ ಶೈಕ್ಷಣಿಕ ಕ್ಷೇತ್ರದಲ್ಲಿ ಕರ್ನಾಟಕದಲ್ಲಿಯೇ ದಾಖಲೆಯನ್ನು ಮಾಡಿದ ಕೆ. ಎಲ್. ಇ. ಶಿಕ್ಷಣ ಸಂಸ್ಥೆ. ತನ್ನ ಕಾಲೇಜನ್ನು ಚಿಕ್ಕೋಡಿಯಲ್ಲಿ ಪ್ರಾರಂಭಿಸುವುದರ ಮುಖಾಂತರ ಶೈಕ್ಷಣಿಕ ರಂಗದಲ್ಲಿ ವಿಶೇಷವಾದ ಬೆಳವಣಿಗೆಯನ್ನು ತೋರಿಸುತ್ತದೆ. ಚಿಕ್ಕೋಡಿಯ ಲಿಬಿರಲ್ ಎಜ್ಯೂಕೇಶನ ಸೋಸಾಯಿಟಿ ಕ್ರಿ. ಶ. ೧೯೬೨ ರಲ್ಲಿ ಆರಂಭಿಸಲು ಉದ್ದೇಶಿಸಿ ಕ್ರಿ. ಶ. ೧೯೬೪ ರಲ್ಲಿ ಇದರ ಅಡಿಗಲ್ಲನ್ನು ಚಿಕ್ಕೋಡಿ ತಾಲೂಕಿನ ಶೈಕ್ಷಣಿಕ ರಂಗದ ಬೆಳವಣಿಗೆಯಲ್ಲಿ ಉತ್ಸಾಹದಾಯಕವಾಗಿ ಕಾರ್ಯವನ್ನು ನಿರ್ವಹಿಸುತ್ತಿರುವ ಶ್ರೀ ಮಲ್ಲಯ್ಯಾ ಸ್ವಾಮಿ ಕವಟಗಿಮಠ ಇವರ ಮುಖಂಡತ್ವದದಲ್ಲಿ ಪ್ರಾರಂಭಿಸಲಾಯಿತು. ಆರಂಭಿಕ ಹಂತದಲ್ಲಿ ಬಡಮಕ್ಕಳಿಗೆ ಶಿಕ್ಷಣವನ್ನು ಕಲಿಸುವ ಉದ್ದೇಶದಿಂದ ಆರಂಭವಾದ ಈ ಶಿಕ್ಷಣ ಸಂಸ್ಥೆ ನಂತರ ಪ್ರೌಢಶಾಲೆಯನ್ನು ಆರಂಭಿಸಿತು. ಆಗಿನ ಶಿಕ್ಷಣ ಮಂತ್ರಿಗಳಾಗಿದ್ದ ಶ್ರೀ ಎಸ್. ಆರ್. ಕಂಠಿಯವರು, ಶ್ರೀ ಮಲ್ಲಯ್ಯಾ ಸ್ವಾಮಿ ಕವಟಗಿಮಠರ ಶಿಕ್ಷಣದ ಬೆಳವಣಿಗೆಯ ಸದುದ್ದೇಶಕ್ಕೆ ಸಹಕಾರವನ್ನು ನೀಡಿದರು."[೧]" ಹಲವಾರು ಆರಂಭಿಕ ತೊಂದರೆಗಳನ್ನು ಎದುರಿಸುತ್ತಾ ಪ್ರಾರಂಭವಾದ ಈ ಶಿಕ್ಷಣ ಸಂಸ್ಥೆ ಇಂದು ಹೆಮ್ಮರವಾಗಿ ಬೆಳೆದು ನಿಂತಿದೆ. ಅಲ್ಲದೆ ಕ್ರಿ. ಶ. ೧೯೮೭ ರಲ್ಲಿ ಅದ್ದೂರಿಯ ಬೆಳ್ಳಿ ಹಬ್ಬವನ್ನು ಆಚರಿಸಿಕೊಂಡು ತನ್ನ ಅಂಗ ಸಂಸ್ಥೆಗಳನ್ನು ತಾಲೂಕಿನಿಂದಾಚೆ ಚಾಚುವುದರ ಮುಖಾಂತರ ಇಂದು ಶಿಕ್ಷಣದ ಬೆಳವಣಿಗೆಯಲ್ಲಿ ಈ ಶಿಕ್ಷಣ ಸಂಸ್ಥೆ ತನ್ನನ್ನು ಗುರುತಿಸಿಕೊಂಡಿದೆ. ಕ್ರಿ. ಶ. ೧೯೭೮ ರಲ್ಲಿ ಚಿಕ್ಕೋಡಿಯುಲ್ಲಿ ಆಂಗ್ಲ ಮಾಧ್ಯಮಿಕ ಪ್ರಾಥಮಿಕ ಶಾಲೆಯುನ್ನು ಈ ಸಂಸ್ಥೆ ಆರಂಭಿಸುವುದರೊಂದಿಗೆ ನಂತರ ಆಂಗ್ಲ ಮಾಧ್ಯಮ ಹೈಸ್ಕೂಲನ್ನು ಆರಂಭಿಸಿ ಗ್ರಾಮೀಣ ಮಟ್ಟದ ಮಕ್ಕಳಿಗೆ ಉನ್ನತ ಮಟ್ಟದ ಶಿಕ್ಷಣವನ್ನು ನೀಡುವತ್ತ ದಾಮುಗಾಲು ಇಡುತ್ತಿದೆ.

ಈ ಸಿ. ಎಲ್. ಇ ಶಿಕ್ಷಣ ಸಂಸ್ಥೆಯೊಂದಿಗೆ ನಗರದಲ್ಲಿ ಕೆ. ಎಲ್. ಇ ಯ ಶ್ರೀ ಬಸವಪ್ರಭು ಮಹಾ ವಿದ್ಯಾಲಯ ತಾಂತ್ರಿಕ ವಿದ್ಯಾಲಯ ಕಾನೂನು ವಿದ್ಯಾಲಯ ಪಾಲಿಟೆಕ್ನಿಕ್ ವಿದ್ಯಾಲಯ ಮತ್ತು ಶಿಕ್ಷಕರ ತರಬೇತಿ ಸಂಸ್ಥೆಗಳನ್ನು ಆರಂಭಿಸುವುದರ ಮುಖಾಂತರ ಈ ತಾಲೂಕಿನ ಶಿಕ್ಷಣ ರಂಗದ ನೇತಾರರಾದ ಡಾ. ಪ್ರಭಾಕರ ಕೋರೆಯವರ ಶೈಕ್ಷಣಿಕ ಪ್ರೇಮದಿಂದಾಗಿ ಚಿಕ್ಕೋಡಿ ಹಾಗೂ ಚಿಕ್ಕೋಡಿ ತಾಲೂಕಿನ ನಿಪ್ಪಾಣಿ ಶಹರದಲ್ಲಿರುವ ೧೯೬೧ ರಲ್ಲಿ ಸ್ಥಾಪನೆಯಾದ ಜಿ. ಆಯ್ ಬಾಗೇವಾಡಿ ಕಾಲೇಜುಗಳು ಬೆಳೆದು ನಿಂತಿರುತ್ತವೆ. ಚಿಕ್ಕೋಡಿ ಭಾಗದ ಜನರಿಗೆ ಕೆ. ಎಲ್. ಇ. ಎಂಬುವುದೇ ಗೊತ್ತಿರದಂತಹ ಸಂದರ್ಭದಲ್ಲಿ ಬೆಳಗಾವಿ ಭಾಗದ ಲಿಂಗಾಯಿತರಿಂದ ಸ್ಥಾಪಿತವಾದ ಈ ಸಂಸ್ಥೆಯನ್ನು ಹೆಮ್ಮರವಾಗಿ ಬೆಳೆಸುವಲ್ಲಿ ಚಿಕ್ಕೋಡಿ ತಾಲೂಕಿನ ಪಾತ್ರ ಅತೀ ಮುಖ್ಯವಾದುದು. ಶಿಕ್ಷಣದಿಂದ ವಂಚಿತರಾದ ಜನತೆಗೆ ಹೆಚ್ಚಿನ ಮತ್ತು ಉನ್ನತ ಶಿಕ್ಷಣವನ್ನು ಕೊಡುವ ಉದ್ದೇಶದಿಂದ ಪ್ರಾರಂಭವಾದ ಈ ಸಂಸ್ಥೆ ಶಿಕ್ಷಣ ರಂಗದಲ್ಲಿನ ಒಂದು ಪ್ರಮುಖ ಕ್ರಾಂತಿಕಾರಿ ಬೆಳವಣಿಗೆ ಎಂದೇ ಹೇಳಬಹುದು. ಕ್ರಿ. ಶ. ೧೯೬೫ ರಲ್ಲಿ ಚಿಕ್ಕೋಡಿ ತಾಲೂಕಿನ ಗಳತಗಾ ಗ್ರಾಮದಲ್ಲಿ ಕೆ. ಎಲ್. ಇ ಶಿಕ್ಷಣ ಸಂಸ್ಥೆಯ ಹೈಸ್ಕೂಲನ್ನು ಆರಂಭಿಸುವದರ ಮುಖಾಂತರ ಚಿಕ್ಕೋಡಿ ತಾಲೂಕಿನ ಶೈಕ್ಷಣಿಕ ರಂಗದಲ್ಲಿ ಮಹತ್ತರ ಬದಲಾವಣೆಯನ್ನು ತಂದಿದೆ.

ಚಿಕ್ಕೋಡಿ ತಾಲೂಕಿನ ಇನ್ನೊಂದು ಶೈಕ್ಷಣಿಕ ರಂಗದ ಪ್ರಗತಿಯ ಚುಕ್ಕೆ ಎಂದರೆ ಚಿಕ್ಕೋಡಿ ತಾಲೂಕಿನ ಬೆಡಕಿಹಾಳ, ಸದಲಗಾ, ನಿಪ್ಪಾಣಿ ಮುಂತಾದ ಪ್ರದೇಶಗಳಲ್ಲಿ ಪದವಿಯವರೆಗೆ ಶಿಕ್ಷಣ ನೀಡುವ ಸಂಸ್ಥೆಗಳು ಇವು ತಾಲೂಕಿನ ಶಿಕ್ಷಣ ರಂಗದ ಬೆಳವಣಿಗೆಗೆ ಕಳಶಪ್ರಾಯವಾಗಿವೆ. ಚಿಕ್ಕೋಡಿ ತಾಲೂಕಿನ ಪ್ರತಿಯೊಂದು ಗ್ರಾಮವು ಶೈಕ್ಷಣಿಕವಾಗಿ ಮುಂದು ವರೆದಿದ್ದು ಇಂದಿನ ಶೈಕ್ಷಣಿಕ ರಂಗದ ಬೆಳವಣಿಗೆಗೆ ತಾನೇನು ಕಡಿಮೆ ಇಲ್ಲ ಎಂಬುವುದನ್ನು ತೋರಿಸುವುದಕ್ಕೆ ಇಲ್ಲಿ ಬೆಳೆದು ನಿಂತ ಸಾಹಿತ್ಯದ ಬೆಳವಣಿಗೆಯ ಒಂದು ಪಕ್ಷಿ ನೋಟವೇ ಸಾಕ್ಷಿ. ತಾಲೂಕಿನ ಹಲವಾರು ಸಾಹಿತಿಗಳು, ಚಿಂತಕರು, ಬರಹಗಾರರು ತಮ್ಮ ಚಿಂತನ-ಮಂಥನಗಳಿಂದ ತಾಲೂಕಿನ ಶಿಕ್ಷಣದ ಮಹತ್ವತೆಗಳನ್ನು ತಮ್ಮ ಬರವಣಿಗೆಗಳ ಮುಖಾಂತರ ತೋರ್ಪಡಿಸಿದ್ದಾರೆ.

ಆರಂಭಿಕ ಕಾಲದಲ್ಲಿ ಮರಾಠಾ ಭಾಷಾ ಪ್ರಭಾವಕ್ಕೊಳಗಾದ ಈ ಪ್ರದೇಶ ಇಂದು ಹಲಾವಾರು ಕನ್ನಡ ಶಕ್ಷಣ ಪ್ರೇಮಿಗಳನ್ನು ಹೊಂದಿರುವ ತಾಲೂಕಾಗಿರುವುದರಿಂದ ಅಘಾಧವಾದ ಕನ್ನಡ ಶಿಕ್ಷಣದ ಬೆಳವಣಿಗೆಗೆ ಪ್ರೋತ್ಸಾಹವನ್ನು ಪಡೆದುಕೊಂಡಿದೆ.ಚಿಕ್ಕೋಡಿ ತಾಲೂಕಿನ ಅಂಕಲಿಯಲ್ಲಿ ಜನಿಸಿದ ಕೋರೆ ಮನೆತನ ತನ್ನ ರಾಜಕೀಯ ವ್ಯವಹಾರಗಳಿಂದ ಶಿಕ್ಷಣ ರಂಗದಲ್ಲಿಯೂ ತನ್ನನು ಗುರುತಿಸಿಕೊಂಡಿದೆ. ಚಿಕ್ಕೋಡಿ ತಾಲೂಕಿನಲ್ಲಿ ಕರ್ನಾಟಕದ ಶೈಕ್ಷಣಿಕ ರಂಗಕ್ಕೆ ಮತ್ತು ಸಾಮಾಜಿಕದಲ್ಲಿನ ತಿಳುವಳಿಕೆಯನ್ನು ಮತ್ತು ಸಾಮಾಜಿಕ ಅರಿವನ್ನು ಮೂಡಿಸುವ ಕಾರ್ಯದಲ್ಲಿ ತೊಡಗಿದ ಈ ಶಿಕ್ಷಣ ಸಂಸ್ಥೆಗಳ ಕಾರ್ಯ

ಶ್ಲಾಘನೀಯ. ಚಿಕ್ಕೋಡಿ ನಗರದಲ್ಲಿರುವ ಕೆ. ಎಲ್. ಇ. ಸಂಸ್ಥೆಯ ಬಸವಪ್ರಭು ಮಹಾ ವಿದ್ಯಾಲಯ, ಚಿದಾನಂದ ಕೋರೆ ಪಾಲಿಟೆಕ್ನಿಕ್, ಕಾನೂನು ಮಹಾವಿದ್ಯಾಲಯ, ಬಿ.ಸಿ.ಎ., ಬಿ.ಬಿ.ಎ ಕೋರ್ಸುಗಳು ಇದೀಗ ಪ್ರಾರಂಭವಾಗಿರು ಇಂಜನೀಯರಿಂಗ ಮಹಾ ವಿದ್ಯಾಲಯಗಳು ರಾಜ್ಯ ಹಾಗು ಹೊರ ರಾಜ್ಯಗಳ ವಿದ್ಯಾರ್ಥಿಗಳಿಗೆ ವರದಾನವಾಗಿವೆ. ಅದೇ ರೀತಿ ಸಿ. ಎಲ್. ಇ. ಸಂಸ್ಥೆಯಿಂದ ನಡೆಯಿಸಲ್ಪಡುತ್ತಿರುವ ಕನ್ನಡ, ಆಂಗ್ಲ, ಉರ್ದು ಮಾಧ್ಯುಮದ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳು ಬಿ. ಎಡ್. ಮಹಾ ವಿದ್ಯಾಲಯ ಮರಾಠಿ ಮಾಧ್ಯಮ ಶಿಕ್ಷಕರ ತರಬೇತಿ ಕೇಂದ್ರ, ಕೈಗಾರಿಕಾ ತರಬೇತಿ ಕೇಂದ್ರಗಳು ಶಿಕ್ಷಣ ರಂಗಕ್ಕೆ ಗಣನೀಯ ಸೇವೆ ಸಲ್ಲಿಸುತ್ತಲಿವೆ. ಸಿ.ಟಿ.ಇ ಸಂಸ್ಥೆಯ ಮಹಿಳಾ ಮಹಾ ವಿದ್ಯಾಲಯ, ಕಲಾ ಹಾಗು ವಾಣಿಜ್ಯ ಮಹಾ ವಿದ್ಯಾಲಯ ಪದವೀ ಪೂರ್ವ ವಿದ್ಯಾಲಯ, ಆಂಗ್ಲ , ಕನ್ನಡ, ಮರಾಠಿ ಪ್ರಾಥಮಿ ಪ್ರೌಢ ಶಾಲೆಗಳು ವೃತ್ತಿ ತರಬೇತಿ ಕೇಂದ್ರ ಮುಂತಾದವು ವಿಶೇಷವಾಗಿವೆ. ಹಾಗೆಯೇ ಚೌಸನ್ ಶಿಕ್ಷಕರ ತರಬೇತಿ ಕೇಂದ್ರ, ಭಾರತಿ ಶಿಕ್ಷಣ ಸಂಸ್ಥೆಯ ಪದವೀ ಪೂರ್ವ ವಿದ್ಯಾಲಯ, ನರ್ಸ ತರಬೇತಿ ವಿದ್ಯಾಲಯಗಳು, ಕುಂದ ಕುಂದಾಚಾರ್ಯ ಸಂಸ್ಥೆಯ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳು, ಶಿವಶಕ್ತಿ ಶಿಕ್ಷಕರ ತರಬೇತಿ ಕೇಂದ್ರ ಮುಂತಾದವುಗಳ ಜೊತೆಯಲ್ಲಿಯೇ ಸರ್ಕಾರಿ ಪ್ರಾಥಮಿಕ ಶಾಲೆಗಳು, ಪ್ರೌಢ ಹಾಗೂ ಪದವಿ ಪೂರ್ವ ವಿದ್ಯಾಲಯಗಳು, ಸ್ಥಳೀಯ ಹಾಗೂ ಸುತ್ತಲಿನ ವಿದ್ಯಾರ್ಥಿಗಳ ಶಿಕ್ಷಣದ ಹಸಿವನ್ನು ನೀಗಿಸಲು ಶ್ರಮಿಸುತ್ತಿವೆ.

ಚಿಕ್ಕೋಡಿ ತಾಲೂಕಿನಲ್ಲಿ ಹೆಸರು ಮಾಡಿರುವ ಕೋಥಳಿಯ ದೇಶ ಭೂಷಣ ಪ್ರಾಥಮಿಕ, ಪ್ರೌಢ ಶಾಲೆಗಳು, ಸ್ಥವನಿಧಿಯ ಬ್ರಹ್ಮಚರ್ಯಾಶ್ರಮದ ಪ್ರಾಥಮಿಕ, ಪ್ರೌಢ ಶಾಲೆಗಳು, ವ್ಹಿ. ಎಸ್. ಎಮ್. ಸಂಸ್ಥೆಯ ಪ್ರಾಥಮಿಕ, ಪ್ರೌಢ ಹಾಗೂ ಶಿಕ್ಷಕರ ತರಬೇತಿ ಕೇಂದ್ರಗಳು, ಕೆ. ಎಲ್. ಇ. ಸಂಸ್ಥೆಯ ಪದವಿ ಹಾಗೂ ಪದವಿ ಪೂರ್ವ ವಿದ್ಯಾಲಯಗಳು, ಡಿ. ಫಾರ್ಮಸಿ ವಿದ್ಯಾಲಯ, ಆಂಗ್ಲ ಮಾದ್ಯಮ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳು ಗಣನೀಯ ಸೇವೆ ಸಲ್ಲಿಸಿವೆ.[೨] ಅದೇ ರೀತಿ ಬೆಡಕಿಹಾಳದ ಲಠ್ಠೆ ಶಿಕ್ಷಣ ಸಂಸ್ಥೆಯ ಪದವಿ ಹಾಗೂ ಪದವಿ ಪೂರ್ವ ವಿದ್ಯಾಲಯಗಳು ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳು ದೇಶಭೂಷಣ ಆಯುರ್ವೇದಿಕ ಮಹಾ ವಿದ್ಯಾಲಯ, ಶಮನೇವಾಡಿಯ ಶಿಕ್ಷಕರ ತರಬೇತಿ ಕೇಂದ್ರ ಬೋರಗಾವಿಯ ಪ್ರಾಥಮಿಕ, ಪ್ರೌಢ ಶಾಲೆಗಳು, ಅರಿಹಂತ ಶಿಕ್ಷಣ ಸಂಸ್ಥೆಯ ಶಾಲೆಗಳು. ಸದಲಗಾ ಪ್ರೌಢ ಶಾಲೆ, ಸದಲಗಾದ ಕುಂದ ಕುಂದಾಚಾರ್ಯ ಸಂಸ್ಥೆಯ ಪ್ರಾಥಮಿಕ, ಪ್ರೌಢ ಶಾಲೆಗಳು, ಯಕ್ಸಂಬಾದ ಗೆಳೆಯರ ಬಳಗದ ಪ್ರಾಥಮಿಕ, ಪ್ರೌಢ ಶಾಲೆ, ಚನ್ನಬಸಪ್ಪಾ ಕರಾಳೆ ಪ್ರೌಢ ಹಾಗೂ ಪದವಿ ಪೂರ್ವ ವಿದ್ಯಾಲಯ, ಜೊಲ್ಲೆ ಸಮೂಹದ 'ಶಿವಶಂಕರ' ಜೊಲ್ಲೆ ಪ್ರಾಥಮಿಕ ಹಾಗೂ ಪ್ರೌಢ ಶಾಲೆ, ಬಸವಜ್ಯೋತಿ ಪದವಿ ಪೂರ್ವ ವಿದ್ಯಾಲಯ ಮೂಗ ಮತ್ತು ಅಂಕವಿಕಲ ವಿದ್ಯಾಲಯ. ಅಂಕಲಿಯ

ಕೆ. ಎಲ್. ಇ ಸಂಸ್ಥೆಯ ಪ್ರಾಥಮಿಕ, ಪ್ರೌಢ, ಹಾಗೂ ಪದವೀ ಪೂರ್ವ ವಿದ್ಯಾಲಯಗಳು, ಗೊಮ್ಮಟೇಶ ಶಿಕ್ಷಣ ಸಂಸ್ಥೆಯ ಶಿಕ್ಷಕರ ತರಬೇತಿ ಕೇಂದ್ರ, ನರ್ಸ ತರಬೇತಿ ಮಹಾ ವಿದ್ಯಾಲಯ, ಬಿ ಬಿ ಎ, ಬಿ. ಸಿ. ಎ ಮಹಾ ವಿದ್ಯಾಲಯ, ಪ್ರಾಥಮಿಕ ಶಾಲೆಗಳು, ಮಾಂಜರಿಯ ಶ್ರೀ ಶಾಂತಿಸಾಗರ ಶಾಲೆ ಮುಂತಾದ ಅನುದಾನಿತ ಹಾಗೂ ಅನುದಾನ ರಹಿತ ಶಿಕ್ಷಣ ಸಂಸ್ಥೆಗಳು, ಶಿಕ್ಷಣ ರಂಗಕ್ಕೆ ಅಮೂಲ್ಯ ಕಾಣಿಕೆಗಳನ್ನು ನೀಡುತ್ತಾ ಬಂದಿವೆ. ನೂರಕ್ಕೂ ಹೆಚ್ಚು ಸರ್ಕಾರಿ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳು ಸಹ ತಮ್ಮದೇ ಆದ ಕಾಣಿಕೆ ನೀಡುತ್ತಲಿವೆ. ಸರ್ಕಾರಿ ಶಾಲೆಗಳಿಗಿಂತ ಖಾಸಗಿ ಶಿಕ್ಷಣ ಸಂಸ್ಥೆಗಳು ಈ ತಾಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪನೆಯಾಗಿದ್ದು ನಿಸ್ವಾರ್ಥ ಸೇವೆ ಸಲ್ಲಿಸುತ್ತ ವಿದ್ಯಾರ್ಥಿಗಳ ಸರ್ವಾಂಗೀಣ ಪ್ರಗತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ವಿಶೇಷವಾದುದು. ಇದೆಲ್ಲದರ ಫಲವಾಗಿಯೇ ಚಿಕ್ಕೋಡಿಯು ಇಂದು ಶೈಕ್ಷಣಿಕ ಜಿಲ್ಲಾ ಸ್ಥಾನವನ್ನು ಅಲಂಕರಿಸಿದ್ದು ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರ ಕಚೇರಿಯನ್ನು ಹೊಂದಿದೆ. ಜೊತೆಗೆ ಸತತ ಮೂರು ವರ್ಷಗಳಿಂದ ಎಸ್. ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಮೊದಲ ಸ್ಥಾನ ಹ್ಯಾಟ್ರಿಕ್ ನಿರ್ಮಾಣ ಮಾಡಿದೆ.

# ಗ್ರಂಥ ಋಣ

| ಕೃತಿ | ಸಂಪಾದಕರು | ಪ್ರಕಟನೆ ವರ್ಷ | ಪುಟ |
|---|---|---|---|
| '೧' ಶ್ರೀ. ಎಮ್. ಕೆ. ಕವಟಗಿಮಠ | ಶ್ರೀ. ಶಿರೀಷ. ಜೋಶಿ | ೨೦೦೮ | ೪೨ |
| '೨' ಚಿಕ್ಕೋಡಿ ಸಮಾಚಾರ ವಾರಪತ್ರಿಕೆ | ಶ್ರೀ. ಎಮ್. ಎನ್. ಭೋಸಲೆ | ೨೦೦೭ | ೨೨ |

# ಸಮಾರೋಪ

ಬೆಳಗಾವಿ ಜಿಲ್ಲೆಯು ಪ್ರಾಚೀನ ಇತಿಹಾಸವನ್ನು ಹೊಂದಿರುವ ವಿಶಾಲ ಕನಾಟಕದ ಒಂದು ಪ್ರಮುಖ ಜಿಲ್ಲೆ. ಈ ಜಿಲ್ಲೆಯಲ್ಲಿ ಅತೀ ದೊಡ್ಡ ತಾಲೂಕು ಮತ್ತು ಶೈಕ್ಷಣಿಕ ಜಿಲ್ಲೆಯಾಗಿ ಕಾರ್ಯ ನಿರ್ವಹಿಸುತ್ತಿರುವ ಪ್ರಮುಖ ತಾಲೂಕವೇ ಚಿಕ್ಕೋಡಿ. ಚಿಕ್ಕೋಡಿ ತಾಲೂಕು ತನ್ನದೇ ಆದ ವಿಶಿಷ್ಟ ಚಾರಿತ್ರಿಕ ಮಹತ್ವವನ್ನು ಹೊಂದಿದ ಪ್ರಮುಖ ತಾಲೂಕು ಎಂದೆನಿಸಿದೆ. ಈ ತಾಲೂಕನ್ನು ನಾನು ನನ್ನ ಪ್ರಬಂಧ ಮಂಡನೆಯ ಅಧ್ಯಯನಕ್ಕೆ ಒಳಪಡಿಸಿಕೊಂಡು ಅಭ್ಯಸಿಸಿದಾಗ ಈ ತಾಲೂಕಿನ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ಮತ್ತು ಶೈಕ್ಷಣಿಕ ಸಂಗತಿಗಳನ್ನು ಅಭ್ಯಸಿಸುತ್ತಾ ಹೋದಂತೆ ಈ ತಾಲೂಕಿನ ಚಾರಿತ್ರಿಕ ವೈಶಿಷ್ಟತೆಯ ಮಹತ್ವದ ಬಗ್ಗೆ ಹಲವಾರು ವಿದ್ವಾಂಸರು ಈಗಾಗಲೇ ಪ್ರಕಟ ಪಡಿಸಿದ ಲೇಖನಗಳ ಮುಖಾಂತರ, ದಿನ ಪತ್ರಿಕೆಗಳ ಮುಖಾಂತರ, ಮತ್ತು ಬೆಳಗಾವಿ ಜಿಲ್ಲೆಯ "ಗೆಜೆಟಿಯರ್", ಚಿಕ್ಕೋಡಿ ತಾಲೂಕಿನ ದರ್ಶನ, ಸೀಮೆ, ಬೆಳಗಾವ ಜಿಲ್ಲೆಯ ಸಾಹಿತ್ಯ ದರ್ಶನ, ಬೆಳಗಾವಿಯ ಬೆಡಗು, ಬೆಳಗಾವಿಯ ಬೆಳಕು, ಬೆಳಗಾವಿ ಜಿಲ್ಲೆಯ ವಿದ್ವತ್ತ ಪರಂಪರೆ, ನಿಪ್ಪಾಣಿ ದರ್ಶನ, ಎಮ್. ಕೆ. ಕವಟಗಿಮಠರ ಮತ್ತು ಶಾಂತಪ್ಪಣ್ಣಾ ಮಿರ್ಜಿ, ಬಸವಪ್ರಭು ಕೋರೆ, ಇವರ ಅಭಿನಂದನಾ ಗ್ರಂಥಗಳನ್ನು ಅವಲೊಕಿಸುತ್ತಾ ಹೋದಂತೆ ಈ ತಾಲೂಕಿನ ಸರ್ವಾಂಗೀಣ ಚಾರಿತ್ರಿಕ ಮಹತ್ವ ಕಂಡು ಬಂದಿತು.

ಕ್ರಿ. ಶ. ೧೯೯೯ ರಲ್ಲಿ ಹೊರಬಂದ ಪ್ರಭಾಕರ ಕೋರೆಯವರ ೫೦ನೇ ಹುಟ್ಟು ಹಬ್ಬದ ಅಭಿನಂದನಾ ಗ್ರಂಥ ಹಾಗೂ ಚಿಕ್ಕೋಡಿ ತಾಲೂಕಿನ ಶಿಲಾಶಾಸನಗಳನ್ನು ಅಭ್ಯಸಿಸುವಲ್ಲಿ 'ಕರ್ನಾಟಕ ಶಿಲಾ ಶಾಸನಗಳು ಸಂಪುಟ – ೪' ಅತೀ ಮಹತ್ವದ ಮಾಹಿತಿಗಳನ್ನು ಒದಗಿಸಿಕೊಟ್ಟಿವೆ. ಚಿಕ್ಕೋಡಿ ತಾಲೂಕವು ಬೆಳಗಾವಿ ಜಿಲ್ಲೆಯಲ್ಲಿ ವಿಶಿಷ್ಟ ಸ್ಥಾನವನ್ನು ಹೊಂದಿದ ಪ್ರದೇಶವಾಗಿದ್ದು ಇದರ ಪ್ರಾಚೀನ ಇತಿಹಾಸವನ್ನು ನಾವು ಶಿಲಾಯುಗ, ಮತ್ತು ತಾಮ್ರ ಯುಗಗಳಿಗೆ ಕೊಂಡೊಯ್ಯ ಬಹುದಾಗಿದೆ. ಚಿಕ್ಕೋಡಿ ತಾಲೂಕಿನ ಕರೋಶಿಯಲ್ಲಿ ಆದಿ ಮಾನವರ ಕಾಲದ ಸಂಸ್ಕೃತಿಯು ನೆಲೆಸಿದ್ದ ಬಗ್ಗೆ ಅವಶೇಷಗಳು ದೊರೆತಿವೆ. ತಾಲೂಕಿನ ಯಕ್ಸಂಬಿ ಮತ್ತು ಕಲ್ಲೋಳಿಗಳಲ್ಲಿ ಶಿಲಾ ತಾಮ್ರ

ಯುಗದ ಮಾನವನ ನೆಲೆಗಳು ಪತ್ತೆಯಾಗಿವೆ. ಹರಪ್ಪಾ ಸಂಸ್ಕೃತಿಯ ಜನರು ತಮ್ಮ ನೆಲೆಗಳನ್ನು ಬದಲಾಯಿಸುತ್ತಾ ಇತ್ತ ಕಡೆಗೆ ಬಂದಿರಬಹುದು ಎಂದು ಉಹಿಸಲಾಗಿದೆ. ಈ ತಾಲೂಕು ಕರ್ನಾಟಕದ ಪ್ರಾಚೀನ ಅರಸು ಮನೆತನಗಳಾದ ಶಾತವಾಹನರು, ಮೌರ್ಯರು, ಕದಂಬರು, ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಸವದತ್ತಿಯ ರಟ್ಟರು, ಸೊಲ್ಲಾಪೂರದ ಶಿಲಾಹಾರರು, ಬಹಮನಿ ಸುಲ್ತಾನರು ಮತ್ತು ಮರಾಠರ ಆಡಳಿತಕ್ಕೆ ಒಳಪಟ್ಟಿತ್ತು ಎಂಬುದು ತಿಳಿದು ಬರುತ್ತದೆ. ನಂತರದ ಕಾಲಾವಧಿಯಲ್ಲಿ ಬ್ರಿಟೀಷರ ಆದಿಪತ್ಯಕ್ಕೆ ಒಳಗಾಗಿ ಕ್ರಿ. ಶ. ೧೯೩೬ ರಲ್ಲಿ ಬೆಳಗಾವಿ ಜಿಲ್ಲೆಯ ಉದಯದೊಂದಿಗೆ ಚಿಕ್ಕೋಡಿ ತಾಲೂಕವೂ ಕೂಡ ಅಸ್ತಿತ್ವಕ್ಕೆ ಬಂದಿತು. ಮುಂದೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಚಿಕ್ಕೋಡಿ ತಾಲೂಕವು ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ಸಲ್ಲಿಸಿದೆ. ಬಳವಂತರಾವ ವರಾಳೆ ಮತ್ತು ಚಿಕ್ಕೋಡಿಯ ಶಿವಲಿಂಗ ಸ್ವಾಮಿಗಳಂತವರು ರಾಜಕೀಯ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದ ಕೊಡುಗೆಯನ್ನು ಸಲ್ಲಿಸಿದ್ದಾರೆ. ಇಲ್ಲಿ ರಾಜಕೀಯ ಬೆಳವಣಿಗೆಗೆ ಇಂದು ಈ ತಾಲೂಕಿನಲ್ಲಿ ಉಳಿದಿರುವ ಕೋಟೆ, ಕೊತ್ತಲುಗಳು ಮತ್ತು ಐತಿಹಾಸಿಕ ಸ್ಮಾರಕಗಳೇ ಸಾಕ್ಷಿಯಾಗಿವೆ. ಕ್ರಿ. ಶ. ೧೯೪೭ರ ಭಾರತದ ಸ್ವಾತಂತ್ರ್ಯದ ನಂತರ ಚಿಕ್ಕೋಡಿ ತಾಲೂಕವು ವಿಶಿಷ್ಠವಾದ ರಾಜಕೀಯ ಮಹತ್ವತವನ್ನು ಕರ್ನಾಟಕದ ರಾಜ್ಯದಲ್ಲಿ ಗುರುತಿಸಿಕೊಂಡಿದೆ. ಚಿಕ್ಕೋಡಿ ತಾಲೂಕಿನ ಶ್ರೇಷ್ಠ ರಾಜಕೀಯ ನೇತಾರರೆಂದೇ ಕರೆಯಿಸಿಕೊಂಡಿರುವ ಸನ್ಮಾನ್ಯ ಶ್ರೀ ಬಿ. ಶಂಕರಾನಂದ ರವರು ಸಂಸತ್ತಿಗೆ ಈ ತಾಲೂಕಿನಿಂದ ಸತತವಾಗಿ ೬ ಬಾರಿ ಆಯ್ಕೆಯಾಗುವುದರೊಂದಿಗೆ ಗಿನೆಸ್ ದಾಖಲೆ ನಿರ್ಮಿಸಿದ್ದಾರೆ.

ಚಿಕ್ಕೋಡಿ ತಾಲೂಕನ್ನು ಸಾಹಿತ್ಯಕವಾಗಿ ಅವಲೋಕಿಸಿ ನೋಡಿದಾಗ ಇಲ್ಲಿ ವೈವಿಧ್ಯ ಮಯವಾದ ಸಾಹಿತ್ಯ ಕಂಡುಬಂದಿದೆ. ಚಿಕ್ಕೋಡಿ ತಾಲೂಕಿನ ಸಾಹಿತ್ಯದ ಜ್ಯೋತಿಯನ್ನು ಬೆಳಗಿಸಿದ ಕೀರ್ತಿ ರಟ್ಟ ಅರಸರಿಗೆ ಸಲ್ಲುತ್ತದೆ. ಇವರು ತಮ್ಮ ಆಡಳಿತದ ಕಾಲಾವಧಿಯಲ್ಲಿ ಹಲವಾರು ಜನ ಸಾಹಿತಿಗಳಿಗೆ ಆಶ್ರಯವನ್ನು ನೀಡುವುದರ ಮೂಲಕ ಈ ಭಾಗದ ಸಾಹಿತ್ಯಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದ್ದು ಕಂಡು ಬರುತ್ತದೆ. ಇದರೊಂದಿಗೆ ಆಧುನಿಕ ಸಾಹಿತ್ಯ ಈ ತಾಲೂಕಿನಲ್ಲಿ ಹುಲುಸಾಗಿಯೇ ಬೆಳೆದಿದೆ. ಈ ತಾಲೂಕು ನಮಗೆ ಹಲವಾರು ಜನಪದ ಸಾಹಿತಿಗಳು, ಬರಹಗಾರರು, ಲೇಖಕರು ಮತ್ತು ವಿದ್ವಾಂಸರನ್ನು ಒದಗಿಸಿ ಕೊಟ್ಟಿದೆ. ಇದರೊಂದಿಗೆ ಚಿಕ್ಕೋಡಿ ತಾಲೂಕು ಗಡಿ ತಾಲೂಕಾಗಿರುವುದರಿಂದ ಮರಾಠಿ ಹಾಗೂ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಒಂದನ್ನೊಂದು ಪೂರಕವಾಗಿ ಬಳಸಿಕೊಂಡಿರುವುದು ಮತ್ತು ಭಾಷಾ ಸಾಮರಸ್ಯವನ್ನು ಅಳವಡಿಸಿಕೊಂಡಿದ್ದು ಶ್ಲಾಘನೀಯವಾಗಿದೆ. ಸದಲಗಾದ ಡಾ. ಆ.ನೇ.ಉಪಾಧ್ಯೆಯವರು ಸಂಶೋಧನಾ ರಂಗದ 'ಆನೆ' ಎಂದು ಗುರುತಿಸಿಕೊಂಡ ಪ್ರಮುಖ ವ್ಯಕ್ತಿಯಾಗಿದ್ದಾರೆ. ಇದರೊಂದಿಗೆ ಇವರು ವಸ್ತುನಿಷ್ಠವಾದ ತಾವು ಸಂಪಾದನೆಗೆ ಹೆಸರು ವಾಸಿಯಾಗಿದ್ದರು. ಈ ತಾಲೂಕಿನ

ಶಮನೇವಾಡಿ 'ಸ್ನೇನಪಕಾಶನ' ವು ತಾಲೂಕಿನ ಬರಹಗಾರರಿಗೆ ಪ್ರೋತ್ಸಾಹವನ್ನು ನೀಡುವುದರೊಂದಿಗೆ ಹಲವಾರು ಕೃತಿಗಳನ್ನು ಹೊರಹಾಕಿದೆ. ಚಿಂಚಣಿಯ ಅಲ್ಲಮಪ್ರಭು ಜನ ಕಲ್ಯಾಣ ಸಂಸ್ಥೆ ಇದು ಒಂದು ಪ್ರಮುಖ ಪ್ರಕಾಶನವಾಗಿ ಗಡಿನಾಡ ತಾಲೂಕಿನ ಸಾಹಿತ್ಯದ ಬೆಳವಣಿಗೆಗೆ ಸಂಪೂರ್ಣವಾಗಿ ತನ್ನನ್ನು ತೊಡಗಿಸಿಕೊಂಡಿದ್ದು ವಿವಿಧ ಬರಹಗಾರರ ಸುಮಾರು ೨೬ ಕೃತಿಗಳನ್ನು ಪ್ರಕಟಿಸಿದೆ.

ಧಾರ್ಮಿಕವಾಗಿ ಚಿಕ್ಕೋಡಿ ತಾಲೂಕವು ಇಂದಿನ ಜಗತ್ತಿನಲ್ಲಿ ಕೋಮು ಸೌಹಾರ್ಧತೆಗೆ ಹೆಸರುವಾಸಿಯಾಗಿದೆ. ಇಲ್ಲಿನ ಜನ, ಜಾತಿ ಮತ – ಬೇಧಗಳನ್ನು ಎಣಿಸಲಾರದೆ ಎಲ್ಲಾ ಧರ್ಮಗಳ ತತ್ವ ಮತ್ತು ಸಮನ್ವಯತೆಯನ್ನು ಎತ್ತಿ ಹಿಡಿದಿದ್ದಾರೆ. ಈ ತಾಲೂಕಿನಲ್ಲಿ ಹಿಂದೂ, ಮರಾಠಾ ಮತು ಇಸ್ಲಾಮಿಕ ಸಂಸ್ಕೃತಿಯ ಜನರು ವಾಸವಾಗಿದ್ದರೂ ವಿವಿಧತೆಯಲ್ಲಿ ಏಕತೆಯನ್ನು ಎತ್ತಿ ಹಿಡಿದಿದ್ದಾರೆ. ಅನ್ಯ ಧರ್ಮಗಳ ಧಾರ್ಮಿಕ ಸಮಾರಂಭಗಳಲ್ಲಿ ಎಲ್ಲರೂ ಪಾಲ್ಗೊಳ್ಳುವುದರ ಮುಖಾಂತರ ಧಾರ್ಮಿಕ ಸೌಹಾರ್ದತೆಯನ್ನು ತೋರ್ಪಡಿಸಿದ್ದಾರೆ.

ಚಿಕ್ಕೋಡಿ ತಾಲೂಕಿನ ಶೈಕ್ಷಣಿಕ ರಂಗವನ್ನು ಅವಲೋಕಿಸಿದಾಗ ಹಿಂದಿನ ಕಾಲದಿಂದಲೂ ಈ ತಾಲೂಕವು ಶಿಕ್ಷಣದ ಕೇಂದ್ರಗಳನ್ನು ಹೊಂದಿದ್ದು ಚಿಕ್ಕೋಡಿ ತಾಲೂಕಿನ ಕಬ್ಬೂರ ಗ್ರಾಮ ಪ್ರಮೂಖ ಶಿಕ್ಷಣ ಕೇಂದ್ರವಾಗಿತ್ತು ಎಂಬುದು ಶಾಸನಗಳಿಂದ ತಿಳಿಡು ಬರುತ್ತದೆ. ಆಧುನಿಕ ಕಾಲದ ಶಿಕ್ಷಣದ ಬೆಳವಣಿಗೆಗೆ ತಾಲೂಕಿನ ಶಿಕ್ಷಣ ಪ್ರೇಮಿಗಳಾದ ಡಾ. ಪ್ರಭಾಕರ ಕೋರೆ, ಶ್ರೀ. ಶಾಂತಪ್ಪಣ್ಣಾ ಮಿರ್ಜಿ, ಎಮ್. ಕೆ. ಕವಟಗಿಮಠ ಮುಂತಾದವರು ಪ್ರೋತ್ಸಾಹವನ್ನು ನೀಡುವುದರ ಮುಖಾಂತರ ತಾಲೂಕಿನ ಶೈಕ್ಷಣಿಕ ಗುಣಮಟ್ಟವನ್ನು ಕಾಯ್ದುಕೊಂಡು ಹೋಗಿದ್ದಾರೆ. ಇಂದು ಈ ತಾಲೂಕು ಪ್ರಾಥಮಿಕ ಹಂತದಿಂದ ಹಿಡಿದು ಸ್ನಾತಕ್ಕೋತ್ತರ ಪದವಿಯೊರಗಿನ ಎಲ್ಲಾ ಶಿಕ್ಷಣದ ಸೌಲಭ್ಯ ಹೊಂದಿದ್ದು ಶೈಕ್ಷಣಿಕ ಜಿಲ್ಲೆ ಎಂದು ಕರೆಯಿಸಿಕೊಂಡಿದೆ.

ಆರ್ಥಿಕವಾಗಿ ಚಿಕ್ಕೋಡಿ ತಾಲೂಕು ಪ್ರಮುಖವಾದ ಪ್ರದೇಶವಾಗಿದೆ. ಇದು ಕೃಷ್ಣಾ, ದೂಧಗಂಗಾ, ವೇದಗಂಗಾ ಮುಂತಾದ ನದಿಗಳ ಮುಖ್ಯ ಪ್ರದೇಶವಾಗಿದ್ದರಿಂದ ಇಲ್ಲಿ ಆಹಾರ ಬೆಳೆಗಳ ಜೊತೆಗೆ ವಾಣಿಜ್ಯ ಬೆಳೆಗಳನ್ನು ಸಹ ಬೆಳೆಯಲಾಗುತ್ತಿದೆ. ತಾಲೂಕಿನ ನಿಪ್ಪಾಣಿ ನಗರ ಪ್ರಮುಖ ವಾಣಿಜ್ಯ ನಗರವಾಗಿದ್ದು ಇಲ್ಲಿ ಕೃಷಿಉತ್ಪನ್ ವಸ್ತುಗಳ ಮಾರುಕಟ್ಟೆಯನ್ನು ಹೊಂದಿದೆ. ಇಲ್ಲಿ ತಂಬಾಕು, ಜೋಳ, ಹತ್ತಿ, ಕಬ್ಬು ಮುಂತಾದ ಬೆಳೆಗಳನ್ನು ಬೆಳೆಯುವುದರೊಂದಿಗೆ ಕೈಗಾರಿಕೆಗಳ ಸ್ಥಾಪನೆಗೆ ಕಾರಣವಾಗಿದೆ. ಈ ತಾಲೂಕವು ೨ ಸಹಕಾರಿ ರಂಗದ ತಳಹದಿಯಲ್ಲಿ ಸಕ್ಕರೆ ಕಾರ್ಖಾನೆಗಳಿದು ೧ ಖಾಸಗಿ ಸ್ವಾಮಿತ್ವ ಹೊಂದಿದ ಸಕ್ಕರೆ ಕಾರ್ಖಾನೆ ಗಳನ್ನು ಹೊಂದಿದೆ. ಅಲ್ಲದೆ ಪಶು ಸಂಗೋಪನೆಯಲ್ಲಿಯೂ

ಮುಂದುವರೆದ ತಾಲೂಕು ಆಗಿದ್ದು ಈ ತಾಲೂಕಿನಲ್ಲಿ 'ಹಾಲಿನ ಶೈತ್ಯಾಗಾರ' ಘಟಕಗಳನ್ನು ಹೊಂದಿದೆ. ಸಹಕಾರಿ ರಂಗದಲ್ಲಿ ಈ ತಾಲೂಕು ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಹೊಂದಿದ್ದು ಒಟ್ಟು ೭೦೮ ಸಹಕಾರಿ ಸಂಘಗಳು ಚಿಕ್ಕೋಡಿ ತಾಲೂಕಿನಲ್ಲಿ ಕಾರ್ಯನಿರತವಾಗಿವೆ.

ಒಟ್ಟಾರೆಯಾಗಿ ಈ ತಾಲೂಕಿನ ಬಗ್ಗೆ ನಾನು ಕೈಗೊಂಡ ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ದೊರೆತ ಮಾಹಿತಿಯನ್ನಾಧರಿಸಿ ತಾಲೂಕಿನ ಸಮಗ್ರ ಚಿತ್ರಣವನ್ನು ನೀಡಲು ಪ್ರಯತ್ನಿಸಿರುವೆ. ಈ ಅಧ್ಯಯನದಿಂದ ತಾಲೂಕಿನ ಸಮಗ್ರ ಅಧ್ಯಯನ ಪೂರ್ಣವಾಯಿತೆಂದಲ್ಲ. ನನಗೆ ಲಭ್ಯವಾದ ಮಾಹಿತಿಗಳು ಮತ್ತು ಸಿಕ್ಕ ಆಕರಗಳ ಸಹಾಯದಿಂದ ನಾನು ಈ ಪ್ರಬಂಧವನ್ನು ರಚಿಸಿರುವೆ. ಇದು ಚಿಕ್ಕೋಡಿ ತಾಲೂಕಿನ ಸಮಗ್ರ ಅಧ್ಯಯನ ಕೈಕೊಳ್ಳುವವರಿಗೆ ಇನ್ನಷ್ಟು ಮಾಹಿತಿ ಒಂದೆಡೆಯಲ್ಲಿ ಸಂಗ್ರಹಿಸಿ ಕೊಡುವ ಇದೊಂದು ಕಿರು ಪ್ರಯತ್ನವಾಗಿದೆ. ತಾವೆಲ್ಲರೂ ಇದನ್ನು ತುಂಬು ಹೃದಯದಿಂದ ಸ್ವಾಗತಿಸುವಿರೆಂಬ ಭರವಸೆ ನನ್ನದಾಗಿದೆ.

# ಪರಿಷ್ಕರಣಾ ಗ್ರಂಥಗಳು


| ಕೃತಿ | ಸಂಪಾದಕರು | ವರ್ಷ |
|---|---|---|
| ೧. 'ಬೆಳಗಾವಿ ಜಿಲ್ಲಾ ಗೆಜೆಟಿಯರ್' (ಇಂಗ್ಲಿಷ್) | ಜೇಮ್ಸ್. ಎಮ್. ಕ್ಯಾಂಬೆಲ್ | ೨೦೦೮ |
| ೨. 'ಇತಿಹಾಸ ಸಂಶೋಧನಾ ಮಾರ್ಗ' | ಡಾ. ಎಮ್. ವ್ಹಿ. ಪದ್ಮಾ<br>ಡಾ. ಎ. ವ್ಹಿ. ವೆಂಕಟರತ್ನ | ೧೯೮೫ |
| ೩. 'ಬೆಳಗಾವಿ ಬೆಳಕು' | ಡಾ. ಎಸ್ ಆರ್. ಗುಂಜಾಳ | ೨೦೦೩ |
| ೪. 'ಬೆಳಗಾವಿ ಬೆಡಗು' | ಡಾ. ಶಾಲನಿ ರಜನೀಶ | ೨೦೦೬ |
| ೫. 'ಬೆಳಗಾವಿ ಜಿಲ್ಲೆಯ ಸಾಹಿತ್ಯ ದರ್ಶನ' | ಡಾ. ಪಿ. ಜಿ. ಕೆಂಪಣ್ಣವರ | ೨೦೦೪ |
| ೬. 'ನಿಪ್ಪಾಣಿ ದರ್ಶನ' (ಮರಾಠಿ) | ಶ್ರೀ. ರಾಜೇಂದ್ರ. ಕಂಗಳೆ | ೨೦೦೨ |
| ೭. 'ಸೀಮೆ' | ಡಾ ॥ ಅನಿಲ ಕಮತಿ<br>ಶ್ರೀ. ಚಂದ್ರಕಾಂತ. ಪೋಕಳೆ | ೧೯೯೭ |
| ೮. 'ಚಿಕ್ಕೋಡಿ ತಾಲೂಕಾ ದರ್ಶನ' | ಶ್ರೀ. ಮದನ್. ಎಸ್. ದೊಡಮನಿ | ೧೯೮೬ |
| ೯. 'ಪ್ರಬಾಂಕಲಿ' | ಪ್ರೊ . ವ್ಹಿ. ಬಿ. ಹಿರೇಮಠ | ೧೯೯೯ |
| ೧೦. 'ಸ್ವಾತಂತ್ರ್ಯ ಯೋಧ ಶಿಕ್ಷಣ ಪ್ರೇಮಿ ಬಸವಪ್ರಭು ಕೋರೆ | ಪ್ರೊ . ಎಸ್. ವಾಯ್. ಹಂಜಿ | ೧೯೯೭ |
| ೧೧. 'ಸಮಾಜ ಭೂಷಣ ಶ್ರೀ. ಶಾಂತಪ್ಪಣ್ಣಾ ಮಿರ್ಜಿ' | ಡಾ. ಪಿ. ಜಿ. ಕೆಂಪಣ್ಣವರ | ೧೯೯೪ |
| ೧೨. 'ಬೆಳಗಾವಿಯ ಜಿಲ್ಲೆಯ ವಿದ್ವತ್ಪರಂಪರೆ' | ಡಾ. ಗುರುಪಾದ ಮರೆಗುದ್ದಿ | ೨೦೦೭ |
| ೧೩. 'ಜೈನ್ ಕ್ಷೇತ್ರಗಳ ಐತಿಹ್ಯ' | ಶ್ರೀ. ಪಿ. ಜಿ. ಕೆಂಪಣ್ಣವರ<br>ಶ್ರೀ. ಟಿ. ಆರ್. ಜೋಡಟ್ಟಿ | ೧೯೯೯ |
| ೧೪. 'ಗಡಿ ನುಡಿ' | ನೀಲಗಂಗಾ ಚರಂತಿಮಠ | ೨೦೦೭ |
| ೧೫. 'ಎಮ್. ಕೆ. ಕವಟಗಿಮಠ' | ಶ್ರೀ. ಶಿರೀಷ. ಜೋಶಿ | ೨೦೦೮ |
| ೧೬. 'ದಾಸೋಹ' | ಶ್ರೀ. ರಾಮಕೃಷ್ಣ. ಮರಾಠೆ | ೨೦೦೭ |

| | | |
|---|---|---|
| ೧೭. 'ಕರ್ನಾಟಕದ ಶಾಸನಗಳು ಸಂಪುಟ-೪' ಕ.ವಿ.ವಿ. ಧಾರವಾಡ | ಕನ್ನಡ ಅಧ್ಯಯನ ಸಂಸ್ಥೆ | ೧೯೬೧ |
| ೧೮. 'ಸುಗಂಧ' (ಶ್ರೀ. ಎಮ್. ಕೆ. ಕವಟಗಿಮಠರ ಅಭಿನಂದನಾ ಗ್ರಂಥ) | ಡಾ. ವ್ಹಿ. ಜಿ. ಹಿರೇಮಠ | ೧೯೯೫ |
| ೧೯. 'ಚಿಂಚಣಿಯ ಶ್ರೀ. ಪ್ರಭುದೇವ ಮಠ ಪರಿಚಯ ಗ್ರಂಥ' ಚರಮೂರ್ತಿ ಮಠ, ಚಿಕ್ಕೋಡಿ | ಶ್ರೀ. ಮ.ನಿ.ಪ್ರ. ನಿಲಕಂಠ ಸ್ವಾಮಿಗಳು | ೧೯೭೧ |

## ಪತ್ರಿಕೆಗಳು

೨೦. 'ಚಿಕ್ಕೋಡಿ ಸಮಾಚಾರ ವಾರ ಪತ್ರಿಕೆ' ವಿಶೇಷ ಸಂಚಿಕೆ ೨೦೦೭

೨೧. 'ಚಿಕ್ಕೋಡಿ ಸಿ.ಎಲ್.ಇ. ಸೋಸಾಯಟಿಯ ಬೆಳ್ಳಿ ಹಬ್ಬದ ಸ್ಮರಣ ಸಂಚಿಕೆ' ೧೯೮೯

೨೨. 'ಸಮಸ್ಕಾರ ಕನ್ನಡ ವಾರ ಪತ್ರಿಕೆ' ೩೦ನೇ ಜೂನ್ ೨೦೦೮

೨೩. 'ಸಂಯುಕ್ತ ಕರ್ನಾಟಕ' ೧೧ನೇ ಸಪ್ಟೆಂಬರ್ ೨೦೦೮

೨೪. 'ವಿಜಯ ಕರ್ನಾಟಕ' ೭ನೇ ಸಪ್ಟಂಬರ್ ೨೦೦೮

